



# ದಿವ್ಯ ಗುಣಗಳ ಹೂಮಾಲೆ

ಭಾಗ ೨

(ಅಧ್ಯಾಯ ೬, ೭, ೮)





ಪ್ರಜಾಪಿತ ಬ್ರಹ್ಮಾ ಕು...

...ಲ್ಲವೆ?
...ತೆಗಳೂ ಶ್ರೇಷ್ಠ ದೈವೀ ಗುಣಗಳಾಗಿವೆ ಈ
ದಿವ್ಯ ಗುಣಗ...
...ಂದಿಗೂ ವಿರೋಧವನ್ನು ಬೆಳೆಸಲಾರ. ಪ್ರತಿ
— ಅಂಶವನ್ನು ಸರಿ...
...ದಿಂದಿರುತ್ತಾನೆ. ಅವನು ಸರ್ವರ ಸ್ನೇಹಿಯೂ

# ದಿವ್ಯ ಗುಣಗಳ ಹೂಮಾಲೆ



ಭಾಗ ೨

(ಅಧ್ಯಾಯ ೬, ೭, ೮)






ಪ್ರಜಾಪಿತ ಬ್ರಹ್ಮಾಕುಮಾರೀ ... ಲ್ಲವೆ ?

ಪಾಂಡವ ... ದಿವ್ಯ ಗುಣಗ ... ತೆಗಳೂ ಶ್ರೇಷ್ಠ ದೈವೀ ಗುಣಗಳಾಗಿವೆ ಈ ... ಅಂಶವನ್ನು ಸರಿ ... ಎಂದಿಗೂ ವಿರೋಧವನ್ನು ಬೆಳೆಸಲಾರ. ಪ್ರತಿ ... ಎಂದಿರುತ್ತಾನೆ. ಆವನು ಸರ್ವರ ಸ್ನೇಹಿಯೂ

ಪ್ರಕಾಶಕರು :

ಪ್ರಜಾಪಿತ ಬ್ರಹ್ಮಾಕುಮಾರೀ ಈಶ್ವರೀಯ ವಿಶ್ವವಿದ್ಯಾಲಯ,
ಪಾಂಡವಭವನ, ಆಬುಪರ್ವತ, ರಾಜಾಸ್ಥಾನ.



ಪ್ರಥಮ ಮುದ್ರಣ :

5000 ಪ್ರತಿಗಳು, ಜನವರಿ 1976



ಪುಸ್ತಕವು ದೊರೆಯುವ ಸ್ಥಳ :

ಸಾಹಿತ್ಯ ವಿಭಾಗ
ಪ್ರಜಾಪಿತ ಬ್ರಹ್ಮಾಕುಮಾರೀ ಈಶ್ವರೀಯ ವಿಶ್ವವಿದ್ಯಾಲಯದ ಸೇವಾಕೇಂದ್ರ
ಮತ್ತು ಆಧ್ಯಾತ್ಮಿಕ ಚಿತ್ರಾಲಯ, ನಂ. 3/A, ನ್ಯೂ ಹೈಸ್ಕೂಲ್ ರೋಡ್,
ವಿಶ್ವೇಶ್ವರಪುರ, ಬೆಂಗಳೂರು-560004

ಮುದ್ರಕರು :

... ಅಂಡ್ ಪ್ಯಾಕೇಜಿಂಗ್ ಇಂಡಸ್ಟ್ರೀಸ್
...ಮಹಲ್ ರೋಡ್,
...010

"ಸ್ವಯಂ ಪರಮಪಿತ ಪರಮಾತ್ಮ ತ್ರಿಮೂರ್ತಿ ಶಿವನು ಪ್ರಜಾಪಿತ ಬ್ರಹ್ಮನ ಮೂಲಕ ಯಾವ ಜ್ಞಾನವನ್ನು ಕೊಟ್ಟಿರುವನೋ ಮತ್ತು ಈಗಲೂ ಕೊಡುತ್ತಿರುವನೋ ಮುಖ್ಯವಾಗಿ ಅದರ ಆಧಾರದ ಮೇಲೆ ಈ ಪುಸ್ತಕವನ್ನು ಬರೆಯಲಾಗಿದೆ."

ಲ್ಲವೆ

ಧ್ಯ ಗುಣಗ ತೆಗಳೂ ಶ್ರೇಷ್ಠ ದೈವೀ ಗುಣಗಳಾಗಿವೆ ಈ
ಂದಿಗೂ ವಿರೋಧವನ್ನು ಬೆಳೆಸಲಾರ. ಪ್ರತಿ
ಅಂಶವನ್ನು ಸರಿ
ದಿಂದಿರುತ್ತಾನೆ. ಅವನು ಸರ್ವರ ಸ್ನೇಹಿಯೂ

# ವಿಷಯಸೂಚಿ

| ಕ್ರ.ಸಂ. | ವಿಷಯ | ಪುಟ |
|---|---|---|
| | ಭೂಮಿಕೆ .... .... .... | V |
| ೧. | ತ್ಯಾಗ, ಔದಾರ್ಯ ಮತ್ತು ಸೇವೆ | ೧ |
| ೨. | ನಿರ್ಭಯ, ನಿಶ್ಚಿಂತೆ, ನಿಸ್ಸಂಕಲ್ಪ; ಸ್ಥಿರ ಮತ್ತು ಏಕರಸ ಹಾಗೂ ಸಾಕ್ಷ್ಯಾವಸ್ಥೆ .... .... | ೨೫ |
| ೩. | ಗುಣಗ್ರಹಣ, ಸ್ನೇಹ ಮತ್ತು ದಯೆ .... | ೪೬ |

ಮಹೇ

# ಭೂಮಿಕೆ

## ಮಹಾ ಸೌಭಾಗ್ಯಶಾಲಿ ದೇವತೆಗಳಾಗುವ ದಿವ್ಯ ಪುರುಷಾರ್ಥ

ವರ್ತಮಾನ ಸಮಯಕ್ಕೆ '**ಪುರುಷೋತ್ತಮ ಸಂಗಮಯುಗ**'ವೆಂದು ಹೇಳಲಾಗುತ್ತದೆ. ಅಂದರೆ ಈ ಸಮಯವು ಕಲಿಯುಗದ ಮುಕ್ತಾಯದ, ಸತ್ಯಯುಗದ ಪ್ರಾರಂಭದ ಸಂಗಮ ಸಮಯವಾಗಿದೆ. ಆದ್ದರಿಂದ ಇಂದು ನಾವು ಈಶ್ವರೀಯ ಜ್ಞಾನವನ್ನು ಧಾರಣೆಮಾಡಿ ನಮ್ಮ ಜೀವನವನ್ನು ಶ್ರೇಷ್ಠ ನಿರ್ವಿಕಾರಿಯನ್ನಾಗಿ ಮಾಡಿಕೊಳ್ಳಲು ಪುರುಷಾರ್ಥ ಮಾಡುತ್ತಿದ್ದೇವೆ. ಮಾನವತೆಯಿಂದ ದೇವತೆಗಳಾಗುವುದೇ ಈ ಈಶ್ವರೀಯ ದಿವ್ಯಶಿಕ್ಷಣವನ್ನು ಜೀವನದಲ್ಲಿ ಅಳವಡಿಸಿಕೊಳ್ಳುವ ಮುಖ್ಯ ಉದ್ದೇಶವಾಗಿದೆ. ದೈವೀ ಸ್ವರಾಜ್ಯವಾದ ಸತ್ಯ ಯುಗದಲ್ಲಿ ದೇವತಾ ಪದವಿಯು ಪ್ರಾಪ್ತಿಯಾಗುತ್ತದೆ. ಆ ಭವಿಷ್ಯದ ಪ್ರಾಪ್ತಿಗೋಸ್ಕರ ನಾವು ಇಂದೇ ಸೂಕ್ಷ್ಮದೇವತೆಗಳಾಗಬೇಕು. ದಿವ್ಯಗುಣಗಳನ್ನು ಧಾರಣೆಮಾಡದಿದ್ದರೆ ಸೂಕ್ಷ್ಮದೇವತೆ ಅಥವಾ ಅವ್ಯಕ್ತ ಸ್ಥಿತಿಯನ್ನು ಹೊಂದಲು ಸಾಧ್ಯವಿಲ್ಲ ಮತ್ತು ಮುಂಬರುವ ಪಾವನ ಪ್ರಪಂಚದಲ್ಲಿ ದೈವೀ ಪದವಿಯನ್ನೂ ಪಡೆಯಲಾರೆವು. ಆದ್ದರಿಂದ ಇಂದು ನಾವು '**ಜ್ಞಾನಮೂರ್ತಿ**' ಗಳಾಗುವುದರ ಜೊತೆಗೆ '**ಗುಣ ಮೂರ್ತಿ**' ಗಳೂ ಆಗುವುದು ಅತ್ಯಾವಶ್ಯಕ.

ಈಶ್ವರೀಯ ಜ್ಞಾನಕ್ಕೂ ದಿವ್ಯಗುಣಗಳಿಗೂ ನಿಕಟ ಸಂಬಂಧವಿದೆ. ಜ್ಞಾನವೇ ಬೀಜ, ದಿವ್ಯಗುಣಗಳೇ ಅದರ ಫಲ. ಜೀವನದಲ್ಲಿ ದಿವ್ಯಗುಣಗಳ ಧಾರಣೆ ಇಲ್ಲದಿದ್ದಲ್ಲಿ ಜ್ಞಾನವೆಂಬ ಬೀಜವನ್ನು ನಾವು ಹಾಕಿಲ್ಲ, ಹಾಕಿದ್ದರೂ ಅದನ್ನು ಸರಿಯಾದ ರೀತಿಯಲ್ಲಿ ಗಮನಕೊಟ್ಟು ಬೆಳೆಸಿಲ್ಲವೆಂದು ತಿಳಿಯಬೇಕು. ದಿವ್ಯ ಗುಣಗಳ ಧಾರಣೆಗೋಸ್ಕರ ಈಶ್ವರೀಯ ಜ್ಞಾನವನ್ನೂ ಸರಿಯಾಗಿ [illegible] ಕೊಳ್ಳಬೇಕು. ನಮ್ಮಲ್ಲಿ ಜ್ಞಾನವೆಂಬ [illegible]ಲ್ಲವೆ?
ತ್ತಡೆಯೋ ದಿವ್ಯಗುಣಗಳೆಂಬ ಕಟ [illegible]
ವೇಳೆ ನಮ್ಮಲ್ಲಿ ದಿವ್ಯ ಗುಣಗಳ [illegible]ತೆಗಳೂ ಶ್ರೇಷ್ಠ. ದೈವೀ ಗುಣಗಳಾಗಿವೆ ಈ
ಯಾವುದೋ ಅಂಶವನ್ನು ಸರಿ[illegible]ಂದಿಗೂ ವಿರೋಧವನ್ನು ಬೆಳೆಸಲಾರ. ಪ್ರತಿ
[illegible]ದಿಂದಿರುತ್ತಾನೆ. ಅವನು ಸರ್ವರ ಸ್ನೇಹಿಯೂ

ಜ್ಞಾನದಲ್ಲಿ ಸಂಪೂರ್ಣ ನಿಶ್ಚಯವಿಲ್ಲದಿದ್ದರೆ ಅಥವಾ ಜ್ಞಾನವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸದೇ ಇದ್ದರೆ ಪುರುಷಾರ್ಥವೂ ಸರಿಯಾದ ರೀತಿಯಲ್ಲಿ ನಡೆಯಲಾರದು. ಅಂದರೆ ಏಕರಸವಾಗಿರಲಾರದು.

## ಶ್ರೇಷ್ಠ ಪುರುಷಾರ್ಥಿಯ ಲಕ್ಷಣಗಳು

'ಪುರುಷಾರ್ಥಿ' ಎಂಬ ಶಬ್ದದ ಅರ್ಥವನ್ನು ಸರಿಯಾಗಿ ತಿಳಿಯದ ಕಾರಣ ಮನುಷ್ಯರು ಪುನಃ ಪುನಃ ತಪ್ಪುಗಳನ್ನು ಮಾಡುತ್ತಲೇ ಇರುತ್ತಾರೆ. "ಹೀಗೇಕೆ ಮಾಡುತ್ತೀರಿ?" ಎಂದು ಕೇಳಿದರೆ "ಏನು ಮಾಡುವುದು ನಾವು ಪುರುಷಾರ್ಥಿಗಳಾಗಿದ್ದೇವೆಯಲ್ಲವೆ? ಈಗ ಯಾರು ತಾನೆ ಸಂಪೂರ್ಣವಾಗಿದ್ದಾರೆ?" ಎಂದು ಉತ್ತರಿಸುತ್ತಾರೆ. ಈ ರೀತಿಯ ಅಪನಂಬಿಕೆಯಿಂದ ಜೀವನದಲ್ಲಿ ನಿರಾಶೆ ನಿರ್ಲಕ್ಷ್ಯ ಉಂಟಾಗುತ್ತವೆ. ಪುರುಷಾರ್ಥದಲ್ಲಿ ತೀವ್ರತೆ ಕಡಿಮೆಯಾಗುತ್ತದೆ. ಒಮ್ಮೆ ಮಾಡಿದ ತಪ್ಪನ್ನು ಮತ್ತೊಮ್ಮೆ ಮಾಡದಿರುವುದೇ ಪುರುಷಾರ್ಥದ ಸತ್ಯ ಅರ್ಥ. ಇದನ್ನು ತಿಳಿದು ಸಾಧನೆಮಾಡಿದರೆ ಪುರುಷಾರ್ಥವನ್ನು ತೀವ್ರಗತಿಯಲ್ಲಿ ಮುಂದುವರಿಸಬಹುದು. ಇಲ್ಲದಿದ್ದಲ್ಲಿ ಕಲಿಯುಗದ ಮಹಾವಿನಾಶವು ಪ್ರಾರಂಭವಾಗುವವರೆವಿಗೂ ದುರ್ಗುಣಗಳೊಂದಿಗೆ ಹೋರಾಡುತ್ತಲೇ ಇರಬೇಕಾಗುತ್ತದೆ ಅಥವಾ ಪುರುಷಾರ್ಥಿಯಾಗಿಯೇ ಉಳಿಯಬೇಕಾಗುತ್ತದೆ, ಸಂಪೂರ್ಣ ಪವಿತ್ರವಾಗಲು ಸಾಧ್ಯವಾಗುವುದಿಲ್ಲ ಮತ್ತು ಸ್ವಯಂ ಪರಮಾತ್ಮನೇ ಇಂದು ಕೊಡುತ್ತಿರುವ ಸರ್ವೋತ್ತಮ ಶಿಕ್ಷಣವನ್ನು ಜೀವನದಲ್ಲಿ ಧಾರಣೆ ಮಾಡದೆ ಸರ್ವಶ್ರೇಷ್ಠವಾದ ಅನೇಕ ಜನ್ಮಗಳ ಪ್ರಾಪ್ತಿಯನ್ನು ನಾಶಮಾಡಿಕೊಂಡು ತಮ್ಮ ಅದೃಷ್ಟಕ್ಕೇ ತಾವೇ ಚ್ಯುತಿ ತಂದುಕೊಳ್ಳುವರು.

ಉದಾಹರಣೆಗೆ ಪಾರಿವಾಳವು ಬೆಕ್ಕು ಬರುವುದನ್ನು ಕಂಡ ಕೂಡಲೆ [illegible] ಬೆಕ್ಕು ಬರತ್ತಿಲ್ಲ, ಬೆಕ್ಕು ಬರುತ್ತಿಲ್ಲ" ಎಂದು ತಿಳಿದು [illegible] ಮುಖವನ್ನು ತಿಂದೇ ಬಿಡುತ್ತದೆ. ಇದೇ ರೀತಿ [illegible] ಣ್ಣಾರೆ ಕಾಣುತ್ತಿದ್ದರೂ, ಮೃತ್ಯುವಿನ [illegible] ಹೈಡ್ರೋಜನ್ ಬಾಂಬ್' ಗಳನ್ನು [illegible] ವ್ಯರ್ಥ ಜೀವನವನ್ನು



ಸಾಗಿಸುತ್ತಿದ್ದಾರೆ. ಆತ್ಮೋನ್ನತಿಯ ಅತಿ ಸುಲಭ ಸಾಧನಗಳನ್ನು ಪರಮಾತ್ಮನೇ ಹೇಳಿಕೊಡುತ್ತಿದ್ದರೂ ಮಾಯಾವೀ ವಿಕಾರೀ ಪ್ರಪಂಚದ ಬಲೆಗೆ ಸಿಕ್ಕಿರುವ ಅಜ್ಞಾನಿ ಮನುಷ್ಯರು ಇದೇ ಸ್ವರ್ಗವೆಂದು ನಂಬಿ, ಕ್ಷಣಿಕ ಸುಖಗಳಿಗೆ ಮಾರು ಹೋಗುತ್ತಿದ್ದಾರೆ. ಇಂತಹವರು ತಮಗೆ ತಾವೇ ದ್ರೋಹಮಾಡಿಕೊಳ್ಳುತ್ತಿದ್ದಾರೆ

"ಮೃತ್ಯುವಿಗೆ ಹೆದರಬೇಕು ಅಥವಾ ವಿನಾಶಕ್ಕೆ ವ್ಯಸನಪಡಬೇಕು" ಎಂಬುದು ನಮ್ಮ ಕಥನದ ಭಾವವಲ್ಲ. ಆಧ್ಯಾತ್ಮಿಕ ಜೀವನದಲ್ಲಿ ಅಧಿಕ ತೊಂದರೆಯನ್ನುಂಟುಮಾಡುವ ಆಲಸ್ಯ, ನಿರ್ಲಕ್ಷ್ಯ ಮೊದಲಾದ ಅವಗುಣಗಳನ್ನು ಬಿಟ್ಟು ಜ್ಞಾನ ಮತ್ತು ಯೋಗದಿಂದ ಶಕ್ತಿಯನ್ನು ತುಂಬಿಕೊಂಡು ಪರಂಧಾಮಕ್ಕೆ ಹೋಗುವ ಯೋಗ್ಯತೆಯನ್ನು ಪಡೆಯಲು ಇಂದಿನಿಂದಲೇ ತೀವ್ರ ಪುರುಷಾರ್ಥ ಮಾಡಬೇಕಲ್ಲವೆ?

ಸಾಧಾರಣ ಪರಿಸ್ಥಿತಿಗಳಿಗೂ ಹೆದರಿಕೊಂಡು ಆ ಪರಿಸ್ಥಿತಿಗಳಿಗೆ ಅಧೀನರಾಗಿ ಪುರುಷಾರ್ಥಹೀನರಾಗುವುದು ಕೆಲವರ ಸ್ವಭಾವವೇ ಆಗಿರುತ್ತದೆ. ಉದಾಹರಣೆಗೆ ಕೆಲವರು—"ಏನು ಮಾಡುವುದು ನಾವೇನೋ ಜ್ಞಾನವನ್ನು ತಿಳಿದುಕೊಳ್ಳಲು ತುಂಬಾ ಅಭಿಲಾಷೆಯುಳ್ಳವರಾಗಿದ್ದೇವೆ. ಆದರೆ ನಮ್ಮ ಮನೆಯಲ್ಲಿ ತುಂಬಾ ಮಕ್ಕಳಿದ್ದಾರೆ. ಆದ್ದರಿಂದ ನಮಗೆ ಸಮಯವೇ ಸಿಕ್ಕುವುದಿಲ್ಲ." ಎನ್ನುತ್ತಾರೆ. ಮತ್ತೆ ಕೆಲವರು—"ನಾವು ಯೋಗಾಭ್ಯಾಸವನ್ನು ಮಾಡಬೇಕೆನ್ನುವ ಅಭಿಲಾಷೆಯುಳ್ಳವರಾಗಿದ್ದೇವೆ. ಆದರೆ ಈ ಮಂಜು ಮುಸುಕಿರುವ ಚಳಿಗಾಲದ ಮೂರು ತಿಂಗಳುಗಳವರೆವಿಗೂ ನಿಮ್ಮ ಈಶ್ವರೀಯ ವಿಶ್ವವಿದ್ಯಾಲಯಕ್ಕೆ ಬರಲಾರೆವು." ಎಂದು ಹೇಳುತ್ತಾರೆ. ಇನ್ನೂ ಕೆಲವರು—"ಈಶ್ವರಾನುಭೂತಿಯನ್ನು ಪಡೆಯಬೇಕೆನ್ನುವ ಇಚ್ಛೆ ಯಾರಿಗೆ ತಾನೇ ಇಲ್ಲ? ನಾವೂ ಜ್ಞಾನದ ಲಾಭವನ್ನು ಪಡೆಯಬೇಕೆನ್ನುತ್ತೇವೆ. ಆದರೆ ನಮ್ಮ ಮನೆಯಲ್ಲಿ ಮದುವೆ ಮುಂತಾದ ಕಾರಣಗಳಿರುವುದರಿಂ[illegible]ಲ್ಲವೆ?
[illegible]ದಾಗಿ ಉತ್ತರಿಸುತ್ತಾರೆ. ಈ ರೀತಿ[illegible]
ಎನ್ನುವ ಮಾಯಾ ಮೊಸಳೆಯು [illegible]ತೆಗಳೂ ಶ್ರೇಷ್ಠ ದೈವೀ ಗುಣಗಳಾಗಿವೆ ಈ
ಯಾರು ಉತ್ತಮ ಪುರುಷಾರ್ಥಿಯ[illegible]ಂದಿಗೂ ವಿರೋಧವನ್ನು ಬೆಳೆಸಲಾರ. ಪ್ರತಿ
[illegible]ದಿಂದಿರುತ್ತಾನೆ. ಅವನು ಸರ್ವರ ಸ್ನೇಹಿಯೂ

ಮೊಸಳೆಯ ಬಾಯಿಂದ ಪಾರಾಗಿ ಜೀವನವನ್ನು ಉನ್ನತ ಮಟ್ಟದ್ದನ್ನಾಗಿ ಮಾಡಿ ಕೊಳ್ಳಲು ತೊಡಗುತ್ತಾರೆ ಸಾಂಸಾರಿಕ ಕಾರ್ಯ ವ್ಯವಹಾರಗಳಲ್ಲಿ ತೊಡಗಿದ್ದರೂ ಆಧ್ಯಾತ್ಮಿಕ ಜೀವನದಲ್ಲಿ ಯಾವ ಕಾರಣಗಳನ್ನೂ ಕೊಡದೆ ಮುಂದುವರೆಯುತ್ತಾರೆ.

ಲೌಕಿಕದಲ್ಲಿ ವಿದ್ಯಾರ್ಥಿಯು ತನ್ನ ಪರೀಕ್ಷೆಯು ಸಮೀಪಿಸಿದಂತೆ ಹಗಲಿ-ರುಳೂ ಶ್ರಮವಹಿಸಿ ವಿದ್ಯಾಭ್ಯಾಸವನ್ನು ಮಾಡಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣ ನಾಗುವಂತೆ ಶ್ರೇಷ್ಠಾತಿಶ್ರೇಷ್ಠ ಈಶ್ವರೀಯ ವಿದ್ಯೆಯಲ್ಲಿಯೂ ವಿಶ್ರಾಂತಿಯನ್ನು ಮಹಾ ಶತ್ರುವೆಂದು ತಿಳಿದು ಮನ, ವಚನ, ಕರ್ಮಗಳಲ್ಲಿ ಸರ್ವ ದೈವೀಗುಣ ಗಳನ್ನೂ ಅಳವಡಿಸಿಕೊಂಡು ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾಗಬೇಕಾಗಿದೆ. ಲೌಕಿಕ ವಿದ್ಯಾರ್ಥಿಯು ಒಂದು ಸಲ ಉತ್ತೀರ್ಣನಾಗದೆ ಇದ್ದರೂ ಮತ್ತೊಂದು ಸಲವಾದರೂ ಪರೀಕ್ಷೆಗೆ ಕುಳಿತು ಉತ್ತೀರ್ಣನಾಗಬಹುದು. ಆದರೆ ಈ ನಮ್ಮ ಈಶ್ವರೀಯ ವಿಶ್ವವಿದ್ಯಾಲಯದಲ್ಲಿ ಹಾಗೆ ಮತ್ತೊಂದು ಸಲ ಪರೀಕ್ಷೆಗೆ ಕುಳಿತು ಕೊಳ್ಳುವ ಸಂದರ್ಭವೇ ಬರುವುದಿಲ್ಲ. ಒಂದು ಸಲ ಅನುತ್ತೀರ್ಣನಾದರೆ ಎಷ್ಟೇ ಪಶ್ಚಾತ್ತಾಪಪಟ್ಟರೂ ಕೂಡ ಪ್ರಯೋಜನವಾಗುವುದಿಲ್ಲ. ಏಕೆಂದರೆ ಇನ್ನು ಸ್ವಲ್ಪ ಸಮಯದಲ್ಲಿಯೇ ಕಲಿಯುಗದ ಈ ಹಳೆಯ ಪ್ರಪಂಚವು ವಿನಾಶವಾಗಿ ಸತ್ಯಯುಗೀ ರಾಮರಾಜ್ಯವು ಸ್ಥಾಪನೆಯಾಗಲಿದೆ. ಅದಕ್ಕೋಸ್ಕರವೇ ಈ ಎರಡು ಯುಗಗಳ ಸಂಧಿ ಸಮಯವಾದ ಈಗ ಜ್ಞಾನ ಸಾಗರನಾದ ಪರಮಾತ್ಮನು ನಮ್ಮನ್ನು ದೇವಿದೇವತೆಗಳನ್ನಾಗಿ ಮಾಡಲು ಈ ಅಲೌಕಿಕ ಶಿಕ್ಷಣವನ್ನು ಕೊಡು ತ್ತಿದ್ದಾನೆ. ನಮ್ಮ ಭವಿಷ್ಯದ ಜನ್ಮ ಜನ್ಮಾಂತರದ ಜೀವಮಾನವೆಲ್ಲಾ ಈ ಶ್ರೇಷ್ಠ ವಿದ್ಯೆಯನ್ನೇ ಆಧರಿಸಿಕೊಂಡಿದೆ ಮತ್ತು ನಮಗೆ ಆರೋಗ್ಯ, ಸುಖ, ಸಂತೋಷಗಳು ಈ ವಿದ್ಯೆಯಲ್ಲಿ ಉತ್ತೀರ್ಣರಾಗುವುದರಿಂದಲೇ ಪ್ರಾಪ್ತವಾಗು ತ್ತವೆ. ಹೀಗಿರುವಾಗ ಆಲಸ್ಯ, ಸೋಮಾರಿತನ ಮೊದಲಾದ ದುರ್ಗುಣಗಳನ್ನು ತೆ[illegible]ಕಲೇ ಬೇಕು.

ಮಹಾ[illegible]

[illegible]ಯಂವರದ ಸಂದರ್ಭದಲ್ಲಿ ಅರ್ಜುನನು [illegible] ಅದರ ಪ್ರತಿಬಿಂಬವನ್ನು ನೋಡಿ [illegible] ಆ ಯಂತ್ರವನ್ನು ಭೇದಿಸಿ

ದ್ರೌಪತಿಯನ್ನು ಪಡೆದನೆಂಬ ಕಥೆಯು ಹೇಳಲ್ಪಟ್ಟಿದೆ. ಅದರ ಆಧ್ಯಾತ್ಮಿಕ ಅರ್ಥವೇನೆಂದರೆ, ಮನುಷ್ಯನು ಜ್ಞಾನದ ಆಧಾರದಿಂದ ಉತ್ತಮ ಗುರಿಯನ್ನಿಟ್ಟು ಅಂದರೆ ತನ್ನ ಬುದ್ಧಿಯನ್ನು ಒಂದೇ ಕಡೆ ಕೇಂದ್ರೀಕರಿಸಿ ಪುರುಷಾರ್ಥವೆಂಬ ಬಾಣ ವನ್ನು ಪ್ರಯೋಗಿಸಿ ತನ್ನ ಸಾಧನೆಯ ಸಂಪೂರ್ಣ ಪ್ರಾಪ್ತಿಯನ್ನು ಅರ್ಥಾತ್ ಏಕರಸಾವಸ್ಥೆಯನ್ನು ಪಡೆದುಕೊಳ್ಳಬೇಕು.

ನಮ್ಮ ಪವಿತ್ರ ಪ್ರೀತಿಯು ಪರಮಾತ್ಮನೊಂದಿಗಿದೆ. ಪರಮಪಿತ ಪರ ಮಾತ್ಮನಿಂದ ಸರ್ವವೂ ಲಭಿಸುವಾಗ. ಇಂದು ಆತನೇ ನಮ್ಮವನಾಗಿ ರುವಾಗ ಮತ್ತಿನ್ನಾವ ಪ್ರಾಪ್ತಿಯ ಅವಶ್ಯಕತೆಯಿದೆ? ನಮ್ಮ ಸರ್ವ ಸಂಬಂಧ ಗಳನ್ನೂ ಆವನೊಂದಿಗೆ ಜೋಡಿಸಬೇಕು. ಏಕೆಂದರೆ ಪರಮಾತ್ಮನು ನಮಗೆ ಸದ್ಗತಿಯನ್ನು ಕೊಡುವುದಕೋಸ್ಕರವಾಗಿಯೇ ಈ ಜ್ಞಾನ ಮತ್ತು ಯೋಗದ ಸಹಜ ಶಿಕ್ಷಣವನ್ನೀಯುತ್ತಿದ್ದಾನೆ. ಈ ಶ್ರೇಷ್ಠ ವಿದ್ಯೆಯನ್ನು ಕೋಟ್ಯಾಂತರ ಮಾನವರಲ್ಲಿ ಕೆಲವರು ಮಾತ್ರ ಅಭ್ಯಾಸಮಾಡುತ್ತಾರೆ. ಇಂದು ನಾವು ಆ ಕೆಲ ವರ ಸಂಖ್ಯೆಯಲ್ಲಿ ಆರಿಸಲ್ಪಟ್ಟ ಮಹಾ ಸೌಭಾಗ್ಯಶಾಲಿಗಳು ಎಂದ ಮೇಲೆ ಪುರು ಷಾರ್ಥ ಮಾಡದೇ ಇರುವ ಭಾಗ್ಯಹೀನ ಮನುಷ್ಯರ ಮಾತುಗಳಿಗೆ ಹೆದರು ವುದೇಕೆ? ಹೀಗೆ ಯೋಚಿಸಿ ನಾವು ನಮ್ಮಲ್ಲಿರುವ ಸೋಮಾರಿತನವನ್ನು ಬಿಡ ಬೇಕು. ಈ ಆಲಸ್ಯ, ಲೋಕಾಪವಾದ ಅಥವಾ ನಮ್ಮದೇ ಆದ ಶಕ್ತಿಹೀನ ಸಂಕಲ್ಪಗಳಿಗೆ ವಶರಾಗಿ ಪುರುಷಾರ್ಥದಲ್ಲಿ ಎಂದೂ ಹಿಮ್ಮೆಟ್ಟಬಾರದು. ನಮ್ಮ ಪುರುಷಾರ್ಥಕ್ಕೋಸ್ಕರ ಒಂದು ಸಲ ಯಾವುದಾದರೂ ಸಲಹೆ ಸಿಕ್ಕಿತೆಂದರೆ ಅದನ್ನು ಕೊನೆಯವರೆವಿಗೂ ಮಾಡುತ್ತಿರಬೇಕು. ಪುನಃ ಪುನಃ ಹೇಳಿಸಿ ಕೊಳ್ಳದೇ ಇದು ನಮ್ಮ ಕರ್ತವ್ಯ ಅಥವಾ ನಮ್ಮ ಪ್ರಾಪ್ತಿಗೋಸ್ಕರವೇ ಎಂದು ತಿಳಿದು ಸ್ಫೂರ್ತಿಯಿಂದ, ಸಂತೋಷದಿಂದ ಪುರುಷಾರ್ಥವನ್ನು ಮುಂದುವರಿಸಬೇಕು.

## ಪ್ರತಿಯೊಂದು ದಿವ್ಯಗುಣವ[illegible]ಲ್ಲವೆ?

ನಾವು ಪ್ರತಿಯೊಂದು ದಿವ[illegible]ತೆಗಳೂ ಶ್ರೇಷ್ಠ ದೈವೀ ಗುಣಗಳಾಗಿವೆ. ಈ ವುದರಿಂದ ಮಹಾಸೌಭಾಗ್ಯಶಾಲಿ[illegible]ಂದಿಗೂ ವಿರೋಧವನ್ನು ಬೆಳೆಸಲಾರ. ಪ್ರತಿ [illegible]ದಿಂದಿರುತ್ತಾನೆ. ಅವನು ಸರ್ವರ ಸ್ನೇಹಿಯೂ

ಮಹಾರಾಜ ಮಹಾರಾಣಿಯರಾಗುತ್ತೇವೆಂದು ತಿಳಿಯುವುದರಿಂದ ನಮ್ಮ ಇಂದಿನ ಪುರುಷಾರ್ಥವು ಸಹಜವಾಗಿ ಶೀಘ್ರಗತಿಯಲ್ಲಿ ಸಾಗುತ್ತದೆ.

ಉದಾಹರಣೆಗಾಗಿ ಅಂತರ್ಮುಖತೆ ಎನ್ನುವ ದಿವ್ಯಗುಣವನ್ನೇ ತೆಗೆದು ಕೊಳ್ಳೋಣ. ಈ ಗುಣವನ್ನು ಜೀವನದಲ್ಲಿ ಧಾರಣೆಮಾಡುವುದರಿಂದ ಅಪಾರ ವಾದ ಆಂತರಿಕ ಆನಂದವು ಅಥವಾ ಸುಖವು ಪ್ರಾಪ್ತಿಯಾಗುತ್ತದೆ. ಈ ಪ್ರಾಪ್ತಿ ಗೋಸ್ಕರವೇ ಎಷ್ಟೋ ಜನ ಮಹಾರಾಜರೂ ತಮ್ಮ ಭೋಗ-ಭಾಗ್ಯವನ್ನು ತೊರೆದು ಸನ್ಯಾಸಿಗಳಾಗಿದ್ದಾರೆ. ಮಾನಸಿಕ ಸುಖ ಶಾಂತಿಗಳನ್ನು ಪಡೆಯ ಬೇಕಾದರೆ ಮನೆ-ಮಹಲು, ಧನ-ಸಂಪತ್ತು, ದಾಸ-ದಾಸಿಯರ ಆವಶ್ಯಕತೆ ಯಿಲ್ಲ. ಕೇವಲ ಅಂತರ್ಮುಖತೆ ಎನ್ನುವ ದೈವೀ ಗುಣದಿಂದಲೇ ಈ ಸತ್ಯ ಸುಖ ಶಾಂತಿಗಳು ದೊರೆಯುತ್ತವೆ.

ಹಾಗೆಯೇ ಸಹನ ಶೀಲತೆ ಎಂಬ ವಿಶೇಷ ದೈವೀಗುಣವನ್ನು ವಿಚಾರ ಮಾಡೋಣ. ಅನೇಕ ವೇಳೆ ಸಹನೆಯಿಂದ ನಮ್ಮ ಜೀವನವೂ, ಧನವೂ ಸುರ ಕ್ಷಿತವಾಗಿರುವ ಸಂಭವವಿದೆ. ಈಗ ನಡೆಯುತ್ತಿರುವ ಕೊಲೆ ಸುಲಿಗೆಗಳಿಗೆ ಕಾರಣ ವೇನು ? ಸಹನಶಕ್ತಿ ಇಲ್ಲದ ಕಾರಣವೇ ಅಲ್ಲವೆ ? ಒಬ್ಬನು ಅತಿ ಕ್ರೋಧಾವೇಶ ದಲ್ಲಿದ್ದಾಗ ಮತ್ತೊಬ್ಬನು ಸಹನೆಯಿಂದ ವರ್ತಿಸಿದ್ದೇ ಆದರೆ ಈ ರೀತಿಯ ಪ್ರಾಣಹಾನಿ, ಧನ ಹಾನಿಗಳಾಗಲು ಸಾಧ್ಯವಿಲ್ಲ. ಆದ್ದರಿಂದ ಮನುಷ್ಯನು ತನ್ನ ಜೀವನದಲ್ಲಿ ಬರುವ ಎಂತಹ ಕಠಿಣ ಪರಿಸ್ಥಿತಿಯಲ್ಲೂ ಸಹನೆಯಿಂದಿರಲೇ ಬೇಕು. ಆಗಲೇ ಬೇರೆಯವರೂ ಶಾಂತರಾಗಿಬಿಡುತ್ತಾರೆ. ಇದರಿಂದ ಸತ್ಯವು ನಿರ್ಣಯವಾಗುತ್ತದೆ. ಪರಸ್ಪರ ತಪ್ಪಿನ ಅರಿವೂ ಆಗುತ್ತದೆ.

ಇದೇ ರೀತಿಯಾಗಿ 'ದಾನ' ಮತ್ತು 'ತ್ಯಾಗ'ಗಳೂ ಅಮೂಲ್ಯ ದೈವೀ ಗು[illegible]ವಾಗಿವೆ. ಈ ಕಲಿಯುಗೀ ತಮೋ ಪ್ರಧಾನ ಸೃಷ್ಟಿಯ ಅಂತಿಮ ಸಮ- [illegible]ಲ್ಲಿ ಈಗ ಪ್ರತ್ಯಕ್ಷವಾಗಿ ನಡೆಯುತ್ತಿರುವ [illegible] ಮನಃ ಪೂರ್ವಕವಾಗಿ ಒಂದು ಹಿಡಿ [illegible] ಸತ್ಯಯುಗದಲ್ಲಿ ಚಿನ್ನದ ಅರಮನೆ [illegible]ಮನ ಕಥೆಯೂ ಇದೆಯಲ್ಲವೆ?

ಪರಮಾತ್ಮನಿಗೆ ಬೇಕಾದುದು ಪವಿತ್ರವಾದ ತುಂಬು ಹೃದಯ ಅರ್ಥಾತ್ ತ್ಯಾಗ ಬುದ್ಧಿ. ಯಾರು ತ್ಯಾಗವನ್ನು ಮಾಡುತ್ತಾರೆಯೋ ಅವರಿಗೆ ಭಾಗ್ಯವು ಅವಶ್ಯವಾಗಿ ಪ್ರಾಪ್ತಿಯಾಗಿಯೇ ಆಗುತ್ತದೆ. **ತ್ಯಾಗವೆಂದರೆ ಭಾಗ್ಯವನ್ನು ಪಡೆದಂತೆ.**

ಸತ್ಯ ಜ್ಞಾನವನ್ನರಿತು ಸೇವೆ ಮಾಡುವುದರಿಂದ ಮನುಷ್ಯನಿಗೆ ಭವಿಷ್ಯದಲ್ಲಿ ರಾಜ ಮುಕುಟವೂ, ಸಿಂಹಾಸನವೂ ಪ್ರಾಪ್ತವಾಗುತ್ತವೆ. ಇತರರ ಸೇವೆ ಮಾಡುವುದೆಂದರೆ ತನ್ನ ಸೇವೆಯನ್ನು ಮಾಡಿಕೊಂಡಂತೆಯೇ ಸರಿ. ಸೇವಾಧಾರಿಯು ಮನಃ ಪ್ರಿಯ, ಲೋಕಪ್ರಿಯ ಮತ್ತು ಪ್ರಭುಪ್ರಿಯನಾಗುತ್ತಾನೆ. ಇದರಿಂದ ವಿಶ್ವದ ಮಹಾರಾಜನಾಗಲು ಅವನಿಗೆ ಸರ್ವರ ಸಹಕಾರವೂ ಸಿಗುತ್ತದೆ.

ಹರ್ಷಿತ ಮುಖವು ಮನುಷ್ಯನ ಮುಖಕ್ಕೆ ವಾಸ್ತವಿಕ ಸೌಂದರ್ಯವಾಗಿದೆ. ಹಸನ್ಮುಖಿಗಳಾಗಿಲ್ಲದವರೇ ಕುರೂಪಿಗಳು, ಶೀತಲತೆ ಎನ್ನುವ ಗುಣವಿದ್ದರೆ ಉಷ್ಣತೆಯನ್ನು ಶೀತಲಮಾಡುವ ಯಂತ್ರವಿದ್ದಂತೆ. ಶೀತಲತಾ ಗುಣವುಳ್ಳ ಮನುಷ್ಯನಲ್ಲಿ ಈ ಜ್ಞಾನವೂ ಮತ್ತು ಈಶ್ವರನ ಸ್ಮೃತಿಯೂ ನಿರಂತರ ಉಳಿದುಕೊಳ್ಳುತ್ತದೆ. ಈ ಗುಣವು ಮನಸ್ಸಿಗೆ ತಂಪನ್ನು ತರುತ್ತದೆ. ಇದರಿಂದ ಮಾನವನ ಕಾರ್ಯದಕ್ಷತೆಯು ವೃದ್ಧಿಯಾಗುತ್ತದೆ. ಯೋಗಸಾಧನೆಯಲ್ಲೂ ತೇರ್ಗಡೆಯಾಗುತ್ತಾನೆ—ಫಲಸ್ವರೂಪವಾಗಿ ಭವಿಷ್ಯ ದೈವೀರಾಜ್ಯದಲ್ಲಿ ಅಪಾರ ಸುಖ ಶಾಂತಿಗಳನ್ನು ಪಡೆಯುವುದಲ್ಲದೆ ಮುತ್ತು, ರತ್ನ, ವಜ್ರ ವೈಡೂರ್ಯ, ಮಾಣಿಕ್ಯ ಮೊದಲಾದ ಸ್ಥೂಲ ಸಂಪತ್ತನ್ನೂ ಪಡೆಯುತ್ತಾನೆ.

ಸಂತುಷ್ಟತೆ ಎಂಬ ದೈವೀಗುಣವಂತೂ ಅವಿನಾಶಿ ಮಾನಸಿಕ ಸುಖವನ್ನುಂಟುಮಾಡುವುದಾಗಿದೆ. ಸಂತುಷ್ಟತೆಯಿಲ್ಲದಿದ್ದರೆ ಇಡೀ ಪ್ರಪಂಚಕ್ಕೆ ಒಡೆಯನಾದರೂ ಮಾನವನು ವಾಸ್ತವಿಕ ಸುಖಶಾಂತಿಗಳನ್ನು ಅನುಭವಿಸಲಾರ ಎಂದ ಮೇಲೆ ಮಹಾರಾಜ ಪದವಿಗಿಂತಲೂ ಸಂತುಷ್ಟತೆ ಎನ್ನುವ ಗುಣವು ಉನ್ನತವಾದುದಾಗಿದೆ ಎಂಬುದು ಸ್ಪಷ್ಟವಾಯಿತಲ್ಲವೆ?

ನಮ್ರತೆ ಮತ್ತು ನಿರಹಂಕಾರತೆಗಳೂ ಶ್ರೇಷ್ಠ ದೈವೀ ಗುಣಗಳಾಗಿವೆ ಈ ಗುಣವುಳ್ಳ ಮನುಷ್ಯನು ಯಾರೊಂದಿಗೂ ವಿರೋಧವನ್ನು ಬೆಳೆಸಲಾರ. ಪ್ರತಿಯೊಬ್ಬರೊಡನೆಯೂ ವಿನಯದಿಂದಿರುತ್ತಾನೆ. ಅವನು ಸರ್ವರ ಸ್ನೇಹಿಯೂ

ಆಗುತ್ತಾನೆ. ಇತರರ ಸ್ನೇಹಯುಕ್ತವಾದ ಸಂಬಂಧವು ಅವನೊಂದಿಗೆ ಬೆಳೆ ದಿರುತ್ತದೆ. ಯಾವುದೇ ಪ್ರಾಪ್ತಿಯನ್ನು ಮಾಡಿಕೊಳ್ಳಬೇಕಾದರೆ ಸ್ನೇಹ ಮತ್ತು ಸಂಬಂಧಗಳೇ ಆ ಪ್ರಾಪ್ತಿಗೆ ಪ್ರಥಮ ಸಾಧನೆಗಳಾಗಿವೆಯಲ್ಲವೆ? ಯಾರ ಸಂಬಂಧವು ಸಂಪೂರ್ಣವಾಗಿ ಪರಮಾತ್ಮನ ಜೊತೆಯಲ್ಲೇ ಇದೆಯೋ ಅವರಿಗೆ ಪರಮಾತ್ಮನಿಂದ ಸಂಪೂರ್ಣ ಸುಖ ಶಾಂತಿ ಆನಂದಗಳು ಪ್ರಾಪ್ತಿಯಾಗುತ್ತವೆ. ನಮ್ರತೆಯ ಗುಣವುಳ್ಳ ವ್ಯಕ್ತಿಯು ನಿರಹಂಕಾರಿಯಾದ ಕಾರಣ ಮನುಷ್ಯ ರಿಂದಲೂ ಪರಮಾತ್ಮನಿಂದಲೂ ಆಶೀರ್ವಾದವನ್ನು ಪಡೆದುಕೊಳ್ಳುತ್ತಾನೆ. ನಿರ-ಹಂಕಾರತೆಯು ಸರ್ವ ದೈವೀ ಗುಣಗಳ ಫಲಸ್ವರೂಪವಾಗಿದೆ. ಈ ಗುಣವು ಯಾರಲ್ಲಿ ಇರುತ್ತದೆಯೋ ಅವರಿಗೆ ಆನಂದವೂ ಈಶ್ವರನ ಶಕ್ತಿಯೂ ಸದಾಕಾಲ ದೊರೆಯುತ್ತಿರುತ್ತದೆ. ನಮ್ರತೆಯಂತೂ ನವರತ್ನ ಖಚಿತವಾದ ಕನಕಾಭರಣ ಕ್ಕಿಂತಲೂ ಅತ್ಯಧಿಕ ಬೆಲೆ ಬಾಳುವ ದಿವ್ಯಾಭರಣವಾಗಿದೆ. ಇದನ್ನು ಧಾರಣೆ ಮಾಡಿದ ಶೋಭಾಯಮಾನ ವ್ಯಕ್ತಿಯು ಸರ್ವರ ಆತ್ಮಿಕ ಸ್ನೇಹವನ್ನು ತನ್ನೆಡೆಗೆ ಆಕರ್ಷಣೆ ಮಾಡಿಕೊಳ್ಳುತ್ತಾನೆ.

ಸರಳತೆಯು ಕುಟಿಲತೆಯೆನ್ನುವ ಮನಸ್ಸಿನ ಕೊಚ್ಚೆಯನ್ನು ತೆಗೆದುಹಾಕುವ ಸಹಜ ಸಾಧನವಾಗಿದೆ. ಕೊಳಚೆಯಲ್ಲಿ ಕ್ರಿಮಿಕೀಟಗಳು ಉತ್ಪನ್ನವಾಗುವಂತೆ ಕುಟಿಲತೆಯಿಂದ ಅನೇಕಾನೇಕ ದುರ್ಗುಣಗಳು ಹುಟ್ಟಿಕೊಳ್ಳುತ್ತವೆ. ಆದರೆ ಸರಳತೆಯಿಂದ ಮಾನವನ ಶಾರೀರಿಕ ಆರೋಗ್ಯವೂ ಚೆನ್ನಾಗಿರುತ್ತದೆ ಸರ್ವ ರಿಗೆ ಪ್ರಿಯನೂ ಆಗುತ್ತಾನೆ

ಗಂಭೀರತೆಯು ಯಾರಲ್ಲಿರುತ್ತದೆಯೋ ಆ ಮನುಷ್ಯನು ಪ್ರತಿಯೊಂದು ಕಾರ್ಯವನ್ನು ಯೋಚಿಸಿ ನಂತರ ಮಾಡುತ್ತಾನೆ ಅವನು ಎಂದೂ ಅಸಫಲತೆ ಯನ್ನು ಪಡೆಯಲಾರ. ಗಂಭೀರತೆಯುಳ್ಳ ಮನುಷ್ಯನು ತನ್ನ ಶಕ್ತಿ, ಸಮಯ, ಧನ, ಜೀವನಗಳನ್ನು ವ್ಯರ್ಥಮಾಡದೇ ಅವುಗಳಿಂದ ಸಂಪೂರ್ಣ ಲಾಭವನ್ನು ಪಡೆಯುತ್ತಾನೆ ಆದ್ದರಿಂದ ಈ ಗಂಭೀರತೆಯೂ ಒಂದು ಮಹಾನ್ ಗುಣ ವಾಗಿದೆ ಧೈರ್ಯದಿಂದ ಮುಂದುವರಿಯುವವರಿಗೆ ಈಶ್ವರನು ಸಹಾಯ ಮಾಡು ತ್ತಾನೆ ಪರಮಾತ್ಮನ ಸಹಾಯದಿಂದ ಪ್ರತಿಯೊಂದು ಕಾರ್ಯದಲ್ಲೂ ಸಫಲತೆ ಯುಂಟಾಗುತ್ತದೆ ನಿರ್ಭಯತೆಯು ಪ್ರಾಣದಾನವನ್ನೀಯುವ ದೈವೀಗುಣ

ವಾಗಿದೆ. ಧೈರ್ಯವಂತನು ಮೃತ್ಯುವಿನಿಂದಲೂ, ಸರ್ವ ವಿಘ್ನಗಳಿಂದಲೂ ಪಾರಗುತ್ತಾನೆ. ಚಿತ್ತಅಡೋಲ (ಸ್ಥಿರ ಬುದ್ಧಿ) ಳಾದವರಿಗೆ ಸ್ವರ್ಗೀಯ ಪ್ರಪಂಚದಲ್ಲಿ ಸ್ಥಿರ ಸಿಂಹಾಸನವೂ ನಿರ್ವಿಘ್ನವಾದ ಸ್ವರಾಜ್ಯವೂ ಪ್ರಾಪ್ತವಾಗುತ್ತದೆ.

ಈ ಪ್ರಕಾರವಾಗಿ ಪ್ರತಿಯೊಂದು ಗುಣವೂ ದಿವ್ಯಗುಣವಾದ ಕಾರಣ ಅಪಾರ ಸುಖವು ಲಭ್ಯವಾಗುತ್ತದೆ. ದಿವ್ಯ ಗುಣಗಳಿಂದ ಉಂಟಾಗುವ ಅಪಾರ ಲಾಭದ ಪರಿಚಯದಿಂದಲೇ ನಾವು ಆ ಗುಣಗಳನ್ನು ನಮ್ಮಲ್ಲಿ ಧಾರಣೆಮಾಡಲು ಪುರುಷಾರ್ಥ ಮಾಡುತ್ತೇವೆ. ಜನ್ಮ ಜನ್ಮಾಂತರಗಳಿಂದ ಭಕ್ತರಾದ ನಾವು ಪರಮಾತ್ಮನ ಪ್ರತಿಮೆಗೆ ಹೂಮಾಲೆಗಳನ್ನು ಅರ್ಪಿಸುತ್ತಾ ಬಂದಿದ್ದೇವೆ. ಈಗ ಅವತರಿತನಾಗಿರುವ ಪರಮ ಪ್ರಿಯ ಪರಮಾತ್ಮನು ಈ ದಿವ್ಯ ಗುಣಗಳ ಸುಂದರ ಸುಗಂಧ ಮಾಲೆಯನ್ನು ನಮಗೆ ಅರ್ಪಿಸುತ್ತಿದ್ದಾನೆ. ಇದು ಅನರ್ಘ್ಯರತ್ನಗಳ ಅಮೂಲ್ಯ ಮಾಲೆಯಾಗಿದೆ. ಈ ಸರ್ವ ಶ್ರೇಷ್ಠವಾದರತ್ನ ಮಾಲೆಯನ್ನು ಸ್ವಯಂ ಪರಮಾತ್ಮನೇ ನಮಗೋಸ್ಕರ ಕೊಡುತ್ತಿರುವಾಗ ನಾವು ಅದನ್ನು ಸ್ವೀಕರಿಸಲೇ ಬೇಕಲ್ಲವೆ? ಇದು ನಮ್ಮ ಭಾಗ್ಯದ ಬಾಗಿಲನ್ನು ತೆರೆಯುವ ಸಾಧನೆಯಾಗಿದ್ದು ಪರಮಾತ್ಮನ ಈ ವರದಾನವನ್ನು ಧಾರಣೆ ಮಾಡುವುದರಿಂದ ಮಹಾ ಸೌಭಾಗ್ಯ ಶಾಲಿಗಳಾಗುತ್ತೇವೆ.

"ದಿವ್ಯಗುಣಗಳ ಹೂಮಾಲೆ" — ಈ ಕೃತಿಯ ಮೊದಲ ಭಾಗವನ್ನು (೧ ರಿಂದ ೫ನೇ ಅಧ್ಯಾಯದವರೆಗೆ) ಈ ಮೊದಲೇ ಪ್ರಕಾಶನ ಮಾಡಿದ್ದೇವೆ.

ಪ್ರಕೃತ ಎರಡನೇ ಭಾಗವು ಉಳಿದ ೬, ೭, ೮, ನೇ ಅಧ್ಯಾಯಗಳಿಂದ ಕೂಡಿದ್ದು ವಿಷಯದ ಸಂಪೂರ್ಣ ವಿವರಗಳನ್ನೊಳಗೊಂಡು ಇದೀಗ ತಮ್ಮ ಹಸ್ತಕಮಲದಲ್ಲಿದೆ. ಧನ್ಯವಾದಗಳು.

ಈಶ್ವರೀಯ ಸೇವೆಯಲ್ಲಿ

ಪ್ರಜಾಪಿತ ಬ್ರಹ್ಮಾಕುಮಾರರು ಮತ್ತು ಕುಮಾರಿಯರು

# ೬. ತ್ಯಾಗ, ಔದಾರ್ಯ ಮತ್ತು ಸೇವೆ



**ಬ್ರಹ್ಮಾಕುಮಾರಿ—** ನಿನ್ನೆಯದಿನ ನಾನು ನಿಮಗೆ ಸರಳತೆಯನ್ನು ಧಾರಣೆ ಮಾಡುವ ಮತ್ತು ಕುಟಿಲತೆಯನ್ನು ತ್ಯಾಗ ಮಾಡುವ ವಿಷಯವನ್ನು ತಿಳಿಸಿದ್ದೆನು. ಕೇವಲ ಕುಟಿಲತೆಯನ್ನು ತ್ಯಾಗ ಮಾಡುವುದೇ ಅಲ್ಲ. ತ್ಯಾಗ್ರವು ಅನೇಕ ಪ್ರಕಾರವಾಗಿರುತ್ತದೆ. ಪ್ರತಿಯೊಂದು ದಿವ್ಯಗುಣಕ್ಕೂ ತನ್ನದೇ ಆದ ವಿಶೇಷತೆಯಿರುವಂತೆ ಅತಿ ಉತ್ತಮ ಗುಣವಾದ ತ್ಯಾಗವನ್ನು ಧಾರಣೆ ಮಾಡಿದ ಮನುಷ್ಯನು ಮಹಾತ್ಮನಾಗುತ್ತಾನೆ. ಇಂದು ಜನರು ಸನ್ಯಾಸಿಗಳನ್ನು 'ಸನ್ಯಾಸಿ' ಎಂದು ಕರೆಯುವುದಲ್ಲದೆ 'ಮಹಾತ್ಮ' ಎಂದೂ ಕರೆಯುವರು. ಏಕೆಂದರೆ ಅವರು ತ್ಯಾಗವನ್ನು ಮಾಡಿರುವವರಾಗಿರುತ್ತಾರೆ. ಎಲ್ಲಾ ಸ್ಥಾನಗಳಿಗಿಂತಲೂ ಪರ್ವತವು ಎತ್ತರವಾಗಿರುವಂತೆ, ಯೋಧರಲ್ಲಿ ಮಹಾರಥರೂ, ಅತಿರಥರೂ ದೊಡ್ಡವರಾಗಿರುವಂತೆ ಎಲ್ಲಾ ಗುಣಗಳಿಗಿಂತಲೂ 'ತ್ಯಾಗ' ಶ್ರೇಷ್ಠವಾದುದು ಮತ್ತು ಗುಣವಂತ ವ್ಯಕ್ತಿಗಳೆಲ್ಲರಿಗಿಂತಲೂ ತ್ಯಾಗಿಯಾದವನೇ ಸರ್ವಶ್ರೇಷ್ಠ. ಬಹು ಎತ್ತರವಾದ ಪರ್ವತದ ತಪ್ಪಲಲ್ಲಿ ನಿಂತ ಮನುಷ್ಯನು ತನ್ನನ್ನು ಅದಕ್ಕೆ ಹೋಲಿಸಿಕೊಂಡು ತಾನು ಅತಿ ಚಿಕ್ಕವನೆಂದು ತಿಳಿಯುವಂತೆ, ಸತ್ಯ ತ್ಯಾಗಿಯಾದವನ ಮುಂದೆ ನಿಂತ ಮನುಷ್ಯನು ತನ್ನನ್ನು ತಾನು ಅಲ್ಪನೆಂದು ತಿಳಿಯುತ್ತಾನೆ. ಈ ಕಾರಣದಿಂದಲೇ ಸಾಧಾರಣ ಜನರು ಮಹಾತ್ಮರ ಮುಂದೆ ತಲೆ ಬಾಗಿಸುವರು.

**ಜಿಜ್ಞಾಸು—** ಸಹೋದರಿಯವರೇ, ಇದು ಸತ್ಯವಾದ ಮಾತೇ ಸರಿ. ತ್ಯಾಗ ಮಾಡುವುದು ಸಾಮಾನ್ಯವಾದ ವಿಷಯವೇನಲ್ಲ. ಇದು ಪರ್ವತದ ತುದಿಗೆ ತಲುಪುವಷ್ಟು ಕಷ್ಟ. ತ್ಯಾಗ ಮಾಡುವುದೆಂದರೆ ತನ್ನನ್ನು ತಾನು ಮಹಾತ್ಮನನ್ನಾಗಿ ಮಾಡಿಕೊಂಡಂತೆ. 'ತ್ಯಾಗ' ಎಂಬುದು ಎಂತಹ ಶಬ್ದವೆಂದರೆ ಅದನ್ನು ಕೇಳುತ್ತಲೇ ಮನುಷ್ಯನಿಗೆ 'ಮಹಾನತೆ'ಯ ಭಾವನೆಯು ತುಂಬಿ ಬರುತ್ತದೆ. ಸಹೋದರಿಯವರೇ, ತಾವು ಯಾವ ಯಾವ ಪ್ರಕಾರದ ತ್ಯಾಗವನ್ನು ಹೇಳುತ್ತಿದ್ದೀರಿ ?

1)

## ಸ್ಥೂಲ ತ್ಯಾಗಕ್ಕೆ ವಿರೋಧವಾಗಿ ಮಾನಸಿಕ ತ್ಯಾಗ

**ಬ್ರಹ್ಮಾಕುಮಾರಿ—** ಸನ್ಯಾಸಿಗಳಾದರೋ ಮನೆ–ಮಠಗಳನ್ನು ತ್ಯಾಗ ಮಾಡಿ ಹೋಗುವರು. ಅವರ ತ್ಯಾಗವು ಸ್ಥೂಲವಾದುದೂ ಸೀಮಿತವಾದುದೂ ಆಗಿದೆ. ಅದು ಸರ್ವಶ್ರೇಷ್ಠ ತ್ಯಾಗವಲ್ಲ. ಗೃಹಸ್ಥನಾಗಿದ್ದರೂ, ಎಲ್ಲಾ ವಿಷಯಗಳ ವ್ಯಕ್ತಿಗಳ ಮುಂದೆ ಇದ್ದರೂ ಅನಾಸಕ್ತನಾಗಿರಬೇಕು. ಸಂಸಾರದಲ್ಲಿ ಕರ್ತವ್ಯವನ್ನು ಮಾಡುತ್ತಿದ್ದರೂ ಮೋಹ–ಮಮಕಾರರಹಿತನಾಗಿರಬೇಕು. ತ್ಯಾಗವೃತ್ತಿಯುಳ್ಳವನಾಗಿರಬೇಕು. ಇಂತಹವರಿಗೆ ಸರ್ವಶ್ರೇಷ್ಠ ತ್ಯಾಗಿಗಳೆಂದು ಹೆಸರು. ಸಂಬಂಧಿಗಳ ಮೇಲಿರುವ ಮೋಹವನ್ನೂ ಮತ್ತು ಕರ್ತವ್ಯದ ಅಭಿಮಾನವನ್ನೂ ಬಿಡುವುದಕ್ಕೆ ಬದಲಾಗಿ ಸನ್ಯಾಸಿಗಳು ದೈಹಿಕ ಸಂಬಂಧ ಮತ್ತು ಲೌಕಿಕ ಕರ್ತವ್ಯಗಳನ್ನು ಬಿಟ್ಟುಬಿಡುತ್ತಾರೆ. ಆದ್ದರಿಂದಲೇ ಅವರದು ಸ್ಥೂಲ ತ್ಯಾಗವೆಂದು ಹೇಳಲಾಯಿತು. ಅರ್ಥಾತ್ ಸ್ಥೂಲವಾದ ಮನೆ–ಹೊಲ, ಪತ್ನಿ–ಪುತ್ರ ಇವರಿಂದ ದೂರವಿರುವರು. ಅವರ ಸಂಗದಲ್ಲಿದ್ದುಕೊಂಡೇ ಅವರ ಬಗೆಗಿರುವ ದೈಹಿಕ ಸಂಬಂಧದ ಭಾವನೆಯ ತ್ಯಾಗ ಮಾಡುವುದಿಲ್ಲ. ಎರಡನೆಯದಾಗಿ ಅವರು ತಮ್ಮ ಹೊಲ–ಮನೆ, ಒಡವೆ–ವಸ್ತ್ರ ಇವುಗಳನ್ನೇನೋ ತ್ಯಾಗ ಮಾಡುವರು ಆದರೆ ಇಡೀ ಸೃಷ್ಟಿಯಿಂದಲೇ ತಮ್ಮ ಬುದ್ಧಿಯನ್ನು ದೂರ (detach) ಮಾಡಲಾರದು. ಆದ್ದರಿಂದಲೇ ಅವರ ತ್ಯಾಗವನ್ನು ಸೀಮಿತ ಮತ್ತು ಸ್ಥೂಲ ಹಾಗೂ ಮಧ್ಯಮವಾದ ಸನ್ಯಾಸವೆಂದು ಕರೆಯಲಾಗಿದೆ. ಮನುಷ್ಯನು ಸಂಸಾರದಲ್ಲಿದ್ದುಕೊಂಡೇ ತಾನು ಇಲ್ಲಿಯವನಲ್ಲವೆಂಬುದನ್ನು ಅನುಭವ ಮಾಡಲಿ ಮತ್ತು ಕಮಲ ಪುಷ್ಪದ ರೀತಿಯಲ್ಲಿರಲಿ – ಇದೇ ಸರ್ವೋತ್ತಮವಾದ ಮತ್ತು ಸತೋಗುಣವಾದ ತ್ಯಾಗವಾಗಿದೆ.

**ಜಿಜ್ಞಾಸು—** ಸಹೋದರಿಯವರೇ, ಇದರಲ್ಲಿ ಬಹಳ ಅಂತರವಿದೆ. ತಾವು ತಿಳಿಸಿದ ತ್ಯಾಗವು ಅಧಿಕ ಕಠಿಣವಾದುದು.

**ಬ್ರಹ್ಮಾಕುಮಾರಿ—** ಇದು ಕಠಿಣವೂ ಹೌದು ಮತ್ತು ಸಹಜವೂ ಹೌದು. ಸನ್ಯಾಸಿಗಳ ತ್ಯಾಗವು ವೈರಾಗ್ಯ ಭಾವನೆಯ ಮೇಲೆ ಆಧಾರಿತವಾಗಿರುತ್ತದೆ. ಯಾವುದೋತರದ ದುಃಖವನ್ನನುಭವಿಸಿ ಅಥವಾ ನೋಡಿ ಅವರಿಗೆ

ವೈರಾಗ್ಯ ಬರುತ್ತದೆ ಮತ್ತು ಅವರಲ್ಲಿ ಪರಮಾತ್ಮನ ವಾಸ್ತವಿಕ ಹಾಗೂ ಪೂರ್ಣ ಜ್ಞಾನವಿರುವುದಿಲ್ಲ. ನಾನು ಯಾವ ಪ್ರಕಾರದ ತ್ಯಾಗದ ಚರ್ಚೆಯನ್ನು ಮಾಡುತ್ತಿದ್ದೇನೊ ಅದು ಜ್ಞಾನ ಅರ್ಥಾತ್ ಅರಿವು ಹಾಗೂ ಪರಿಚಯದಿಂದ ಮಾಡಲಾಗುತ್ತದೆ. ತಿಳುವಳಿಕೆಯಿಂದ ಮಾಡಿದ ಕಾರ್ಯವು ಕಠಿಣವಾಗಿರುವುದಿಲ್ಲ. ಸನ್ಯಾಸಿಗಳಾದರೋ ಕಾಡಿಗೆ ಹೋಗಿ ಹಠಯೋಗ ಮೊದಲಾದವುಗಳನ್ನು ಮಾಡಿ, ದೀರ್ಘ ಕಾಲದ ಉಪವಾಸವನ್ನಾಚರಿಸಿ ನಾನಾ ರೀತಿಯಲ್ಲಿ ತಮಗೆ ತಾವೇ ಶಾರೀರಿಕ ಯಾತನೆಯನ್ನನುಭವಿಸುವರು. ಆದರೆ ನಾನು ಹೇಳಿದ ಪರಮಹಂಸ ಸನ್ಯಾಸ ಅಥವಾ ಸಹಜ ರಾಜಯೋಗ ಸನ್ಯಾಸದಲ್ಲಿ ಕಷ್ಟಪಡುವ ಮಾತೇ ಇಲ್ಲ. ಇದು ಮನಸ್ಸು ಅಥವಾ ಬುದ್ಧಿ ಯಿಂದ ಮಾಡಬೇಕಾದ ತ್ಯಾಗವಾಗಿದೆ. ಇದರಲ್ಲಿ ಆಸಕ್ತಿ ಹಾಗು ಈ ಸಾಂಸಾರಿಕಇಚ್ಛೆಗಳನ್ನು ತ್ಯಾಗ ಮಾಡಬೇಕಾದ ಮಾತಿದೆ. ಆದ್ದರಿಂದ ಇದು ಒಂದು ದೃಷ್ಟಿಕೋಣದಿಂದ ಕಠಿಣವೇನಲ್ಲವಾದರೂ ಇದು ಸೂಕ್ಷ್ಮ ಅರ್ಥಾತ್ ಮಾನಸಿಕ ವಾದುದರಿಂದ ಅವಶ್ಯವಾಗಿ ಇದಕ್ಕಾಗಿ ಸಾಧನೆ ಮಾಡಬೇಕಾಗುತ್ತದೆ.

**ಜಿಜ್ಞಾಸು—** ಆಸಕ್ತಿ ಮತ್ತು ಇಚ್ಛೆಗಳನ್ನು ಮನಸ್ಸಿನಿಂದ ತ್ಯಾಗ ಮಾಡುವುದು ಹೇಗೆ ? ಆ ತ್ಯಾಗಗಳು ಯಾವುವು ?

## ಕರ್ಮೇಂದ್ರಿಯಗಳ ವಿಷಯಾಸಕ್ತಿ ಮತ್ತು ತೃಷ್ಣೆಯ ತ್ಯಾಗ

**ಬ್ರಹ್ಮಾಕುಮಾರಿ—** ಸರ್ವೋತ್ತಮ ಅಥವಾ ಸತೋಗುಣದ ತ್ಯಾಗದಲ್ಲಿ ಎಂಟು ಪ್ರಕಾರದ ತ್ಯಾಗವು ಸಮ್ಮಿಳಿತವಾಗಿದೆ. ಮೊದಲನೆಯದಾಗಿ ಕರ್ಮೇಂದ್ರಿಯಗಳ ವಿಷಯಾಸಕ್ತಿ, ಬಯಕೆ, ತೃಷ್ಣೆ ಅಥವಾ ಇಚ್ಛೆಯ ತ್ಯಾಗ ಮಾಡಬೇಕು. ಮನುಷ್ಯನು ಕರ್ಮೇಂದ್ರಿಯಗಳ ಮೂಲಕ ಕರ್ಮವನ್ನೇನೋ ಮಾಡಬೇಕು. ಆದರೆ ಯಾವ ವಿಕರ್ಮವನ್ನೂ ಮಾಡಬಾರದು ಮತ್ತು ಶಬ್ದ, ಸ್ಪರ್ಶ ರೂಪ, ರಸ, ಗಂಧಾದಿ ರುಚಿಗಳಲ್ಲಿ ಮುಳುಗಬಾರದು. ಇಂದು ಮನುಷ್ಯನು ತಿನ್ನುವುದರಲ್ಲಿ, ಕುಡಿಯುವುದರಲ್ಲಿ ಆಸಕ್ತಿ, ಅಡಂಬರದ ಶೃಂಗಾರ, ಅಶ್ಲೀಲವಾದ ಹಾಡುಗಳ ಬಗ್ಗೆ ಅಕರ್ಷಿತನಾಗಿ ಕರ್ಮೇಂದ್ರಿಯಗಳ ವಶನಾಗಿರುವನು. ಇದರಿಂದ ಅವನು ಪರತಂತ್ರನಾಗುವುದಲ್ಲದೆ ದುಃಖಿಯಾಗುತ್ತಾನೆ. ಆದ್ದರಿಂದ

ತನ್ನನ್ನು ಈ ಶರೀರದಲ್ಲಿನ ನೆಂಟನೆಂದು ತಿಳಿದು ಬದುಕಿರುವುದಕ್ಕಾಗಿ ಭೋಜನ, ವಸ್ತ್ರ ಇವುಗಳನ್ನು ಗ್ರಹಣ ಮಾಡುತ್ತಿದ್ದರೂ ಅವುಗಳ ಮೇಲೆ ಅತಿಯಾದ ಆಸಕ್ತಿ ಇರಬಾರದು. ಇದು ತ್ಯಾಗದ ಮೊದಲ ಹೆಜ್ಜೆ. ಇದರಲ್ಲಿ ಕುಸಂಗದ ತ್ಯಾಗವೂ ಸಮ್ಮಿಳಿತವಾಗಿದೆ. ಏಕೆಂದರೆ ಮನುಷ್ಯನು ಯಾವಾಗ ಕರ್ಮೇಂದ್ರಿಯಗಳ ಮೂಲಕ ಯಾವುದೇ ವಿಕರ್ಮವನ್ನು ಮಾಡದಿರುವುದರ ಕಡೆಗೆ ಮತ್ತು ಊಟ–ಉಪಚಾರ, ಒಡವೆ ವಸ್ತ್ರಗಳ ಮೇಲೆ ಆಸಕ್ತಿಯನ್ನಿಡುವುದಿಲ್ಲವೋ ಆಗ ಅವನು ಕುಸಂಗದಲ್ಲಿ ಹೋಗುವ ಪ್ರಶ್ನೆಯೇ ಏಳುವುದಿಲ್ಲ. ವಾಸ್ತವವಾಗಿ ಕುಸಂಗದ ತ್ಯಾಗದಿಂದಲೇ ವಿಕರ್ಮಗಳ ತ್ಯಾಗದ ಭಾವನೆಯೂ ದೃಢವಾಗುತ್ತದೆ.

## ಮನಸ್ಸಿನಿಂದ ದೇಹ ಸಂಬಂಧಿಗಳ ಭಾವನೆಯನ್ನೂ ವೃತ್ತಿಯಿಂದ ದೇಹ ಸಂಬಂಧಗಳ ಸ್ಮೃತಿಯನ್ನೂ ತ್ಯಾಗ ಮಾಡುವುದು.

ಎರಡನೆಯದಾಗಿ ಮನಸ್ಸಿನಿಂದ ಹಾಗೂ ಬುದ್ಧಿಯಿಂದ ದೇಹದ ಸಂಬಂಧಿಗಳ ತ್ಯಾಗ. ದೇಹ ಸಂಬಂಧಿಗಳ ಸಂಗದಲ್ಲಿದ್ದರೂ, ಅವರೊಡನೆ ಜೀವಿತ ಕಾರ್ಯವ್ಯವಹಾರಗಳನ್ನು ನಡೆಸುತ್ತಿದ್ದರೂ ಮನಸ್ಸಿನಲ್ಲಿ ಅವರ ಮೇಲೆ ಮೋಹ ಮಮತೆ ಇರಬಾರದು ಅಥವಾ ಆ ಸಂಬಂಧಗಳ ಸೆಳೆತದ ಅನುಭವವಾಗಬಾರದು ಅಥವಾ ಬುದ್ಧಿಯಲ್ಲಿ ಅವರ ನೆನಪು ಸತಾಯಿಸಬಾರದು. ಇದೇ ದೇಹ ಸಂಬಂಧಿಗಳ ಮಾನಸಿಕ ತ್ಯಾಗ. ಸಂಬಂಧಿಗಳೊಡನೆ ಸ್ನೇಹವಿದ್ದರೂ ಚಿಕ್ಕಪ್ಪ, ಭಾವ, ಅಮ್ಮ ಮೊದಲಾದ ಸಂಬಂಧಗಳಿಗೆ ವಶವಾಗುವ ಪ್ರೀತಿಯಿರಬಾರದು. ಇದಕ್ಕೆ ಬದಲಾಗಿ ಶುದ್ಧ, ನಿಸ್ವಾರ್ಥ, ಆತ್ಮಿಕ ಸ್ನೇಹವಿರಬೇಕು. ಇವರು ನಮ್ಮ ಅಜ್ಜ, ಇವರು ನಮ್ಮ ತಾಯಿ, ಇವರು ನಮ್ಮ ತಂದೆ ಎಂಬ ತಿಳಿವಳಿಕೆಯಂತೂ ಇರಲಿ. ಆದರೆ ಅವರೊಡನಿದ್ದಾಗ ಆ ಸಂಬಂಧದ ಆಂತರಿಕ ಅನುಭವವಾಗಬಾರದು, ನರ ನಾಡಿಗಳಲ್ಲಿ ಆ ಸಂಬಂಧದ ಅನುಭೂತಿಯಾಗಬಾರದು, ಆ ದೈಹಿಕ ಬಾಂಧವ್ಯಕ್ಕೆ ಅಂಟಿಕೊಳ್ಳಲಾಗದು ಹಾಗೂ ಬುದ್ಧಿಯು ಅದರಿಂದ ಸೆಳೆಯಲ್ಪಡಬಾರದು ಅಥವಾ ಅಲ್ಲಿಯೇ ನಿಲ್ಲಬಾರದು.

## ಲೋಕಲಜ್ಜೆ, ನಿಂದಾ-ಸ್ತುತಿ ಹಾಗೂ ಮಾನಾಪಮಾನದ ತ್ಯಾಗ

ಮೂರನೆಯದು ಲೋಕಲಜ್ಜೆಯ ತ್ಯಾಗ. ಈ ಕಲಿಯುಗದ ಸಂಸಾರದಲ್ಲಿ ಯಾವ ವ್ಯಕ್ತಿಯಾದರೂ ಒಳ್ಳೆಯ ಮಾರ್ಗದಲ್ಲಿ ನಡೆಯುತ್ತಿದ್ದರೆ ಜನರು ಅವನನ್ನು ಹೆಡ್ಡನೆಂದೂ, ಹುಚ್ಚನೆಂದೂ ತಿಳಿಯುವರು ಮತ್ತು ಅವನನ್ನು ಗೇಲಿ ಮಾಡುವರು. ಕೆಲವರು ಅವನನ್ನು ನೋಡಿ ಇವನಿಗೆ ಮಂಕು ಹಿಡಿದಿದೆಯೆಂದೂ ಮತ್ತೆ ಕೆಲವರು ಇವನು ತಪ್ಪುದಾರಿ ಹಿಡಿದಿರುವನೆಂದೂ ಹೇಳುವರು. ಇನ್ನೂ ಕೆಲವರು ಜ್ಞಾನ ಹಾಗೂ ಯೋಗ ಮೊದಲಾದುವುಗಳಲ್ಲಿ ಇರುವುದಾದರೂ ಏನು ? ಈಶ್ವರನನ್ನು ಯಾರಾದರೂ ನೋಡಿರುವರೇ ಅಥವಾ ಪಡೆದಿರುವರೇ ? ಎಂಬುದಾಗಿ ಅವನನ್ನು ಪ್ರಶ್ನಿಸುವರು. ಮೂಢನಂಬಿಕೆಯ ವ್ಯರ್ಥ ಮಾತಾಡುವನೆಂದು ಖಂಡಿಸುವರು. ಇನ್ನು ಕೆಲವರಂತೂ ವೃಥಾ ಹಿಂಸೆ ಕೊಡುವರಲ್ಲದೆ ವಿಘ್ನವನ್ನು ತಂದೊಡ್ಡುವರು. ಆದರೂ ತ್ಯಾಗಿಯಾದ ವ್ಯಕ್ತಿಯು ಮಾನ–ಅಪಮಾನ, ನಿಂದಾ–ಸ್ತುತಿ ಮತ್ತು ಚಿಂತಾಭಾವನೆಗಳನ್ನು ಬಿಟ್ಟು ಬಿಡುವನು. ಯಾವುದನ್ನು ತನ್ನ ಶ್ರೇಷ್ಠ ಲಕ್ಷ್ಯವನ್ನಾಗಿಟ್ಟುಕೊಂಡಿರುವನೋ ಅದಕ್ಕಾಗಿ ಲೋಕಚರ್ಚೆಯನ್ನು ಕೇಳುತ್ತಿದ್ದರೂ ಕೇಳದಂತಿರುವನು. ಗೃಹಸ್ಥ ಧರ್ಮದಲ್ಲಿದ್ದರೂ ಪ್ರತಿದಿನ ಈ ರೀತಿಯ ಕಹಿ, ಕಠಿಣ ವಚನಗಳನ್ನು ಕೇಳುತ್ತಿದ್ದರೂ ಈ ಬಾಧೆಗಳ ಮಧ್ಯೆ ಇದ್ದಾಗ್ಯೂ ಅವುಗಳು ಮನಸ್ಸನ್ನು ಸ್ಪರ್ಶಿಸದಂತೆ ಇರಬೇಕು. ಇದೇನು ಸಾಧಾರಣ ಸನ್ಯಾಸವಲ್ಲ!

## ದೇಹ-ಅಭಿಮಾನದ ತ್ಯಾಗ

ನಾಲ್ಕನೇ ಪ್ರಕಾರದ ತ್ಯಾಗವೆಂದರೆ ದೇಹ–ಅಭಿಮಾನದ ತ್ಯಾಗ ಸನ್ಯಾಸಿಗಳು ಗೃಹಸ್ಥಾಶ್ರಮಧರ್ಮವನ್ನು ಒಮ್ಮೆಲೇ ಬಿಟ್ಟು ಅದರಿಂದ ಸದಾ ಕಾಲ ದೂರವಾಗಿದ್ದು ಬಿಡುವರು. ಗೃಹಸ್ಥ ಧರ್ಮವನ್ನು ಬಿಟ್ಟನಂತರ ಅವನ ಮನೆಯವರೊಡನೆ ಯಾವುದೇ ರೀತಿಯ ಕೊಡುವ ಪಡೆಯುವ ವ್ಯವಹಾರ ಅಥವಾ ಸಂಬಂಧವಿರುವುದಿಲ್ಲ. ಮನೆಯವರು ಹಾಗೂ ಸಂಬಂಧಿಗಳು ಅವನ ಕಣ್ಣಿನಿಂದ ದೂರವಿರುವರು. ಆದರೆ ಯಾವ ದೇಹದಲ್ಲಿ ಅಂತಿಮ ಶ್ವಾಸದವರೆಗೂ ಮನುಷ್ಯ

ನಿರುವನೋ. ಯಾವುದರ ಮೂಲಕ ಪ್ರತಿದಿನ ಕಾರ್ಯವ್ಯವಹಾರಗಳನ್ನು ಮಾಡುವನೋ ಪ್ರತಿ ಕ್ಷಣದಲ್ಲಿ ಯಾವುದರ ಮೂಲಕ ನೋಡುವನೋ, ಕೇಳುವನೋ, ಹೇಳುವನೋ **ಆ ದೇಹದ ನಿತ್ಯ ಸಂಗದಲ್ಲಿದ್ದರೂ ಅದರಿಂದ ಅಸಂಗನಾಗಿರಬೇಕು—ಇದೇ ಅತಿಗಹನ ಹಾಗೂ ದೊಡ್ಡ ತ್ಯಾಗ!** ಜನ್ಮಜನ್ಮಾಂತರದಿಂದಲೂ ಮನುಷ್ಯನು ತನ್ನನ್ನು ದೇಹವೆಂದು ನಂಬುವ ಸಂಸ್ಕಾರವು ಪಕ್ವವಾಗಿಬಿಟ್ಟಿದೆ. ''ನಾನು ಪುರುಷ, ನಾನು ಸ್ತ್ರೀ ನಾನು ವೃದ್ಧ, ನಾನು ಇಂತಹವನು'' ಇತ್ಯಾದಿಯಾದ ಅಭ್ಯಾಸದ ಮೇಲೆ ಆಧಾರಿತವಾದ ಮಾತುಗಳನ್ನು ಒಂದು ದಿನದಲ್ಲಿ ಸಾವಿರಾರುಸಾರಿ ಆಡುತ್ತಾನೆ. ಈಗ ಈ ದೇಹ ಹಾಗೂ ದೇಹಭಾವನೆಯನ್ನು ಮರೆಯುವುದು ಮತ್ತು ತನ್ನನ್ನು ಒಂದು ಆತ್ಮವೆಂದು ನಂಬುವುದು, ಯಾವಾಗ ಬೇಕೋ ಆಗ ಶರೀರವನ್ನು ಸಡಿಲಬಿಡುವುದು, ಕರ್ಮೇಂದ್ರಿಯಗಳನ್ನು ಕರ್ಮದಿಂದ ವಾಪಸು ಸೆಳೆದುಕೊಂಡು ಆತ್ಮ-ಭಾವದಲ್ಲಿ—ಲೀನವಾಗುವುದು ಇದೇರಾಜಯೋಗ ಅಥವಾ ಸನ್ಯಾಸವಾಗಿದೆ. ಮರಣದನಂತರ ಎಲ್ಲ ಆತ್ಮಗಳೂ ಶರೀರವನ್ನು ತ್ಯಾಗ ಮಾಡಿಯೇ ತೀರುತ್ತವೆ. ಆದರೆ ಬದುಕಿದ್ದಾಗಲೇ ದೇಹಭಾವನೆಯನ್ನು ತ್ಯಾಗಮಾಡುವುದು ಅರ್ಥಾತ್ ಸತ್ಯ ಅರ್ಥದಲ್ಲಿ 'ದ್ವಿಜನ್ಮ' ಪಡೆಯುವುದು ಅತಿ ವಿಚಿತ್ರವಾದ ತ್ಯಾಗವಾಗಿದೆ. ಈ ತ್ಯಾಗದಲ್ಲಿಯಾದರೋ ಬುದ್ಧಿಯಿಂದ ಇಡೀ ವಿಕಾರಿ ಸಂಸಾರದ ತ್ಯಾಗವು ಸಮ್ಮಿಳಿತವಾಗಿದೆ. ಏಕೆಂದರೆ ಯಾವಾಗ ಮನುಷ್ಯನು ದೇಹವನ್ನೇ ಮರೆಯುವನೋ ಮತ್ತು ಆತ್ಮಿಕ ಸ್ಮೃತಿಯಲ್ಲಿ ಸ್ಥಿತನಾಗುವನೋ ಆಗ ಅವನು ಇಡೀ ಸಂಸಾರವನ್ನೇ ತ್ಯಾಗಮಾಡಿದಂತೆಯೇ ಸರಿ. ದೇಹಾಭಿಮಾನದ ತ್ಯಾಗ ಅರ್ಥಾತ್ ಯಾವ ದೇಹವನ್ನು ನಾವು ಧಾರಣೆಮಾಡಿರುವೆವೋ ಅದರ ಮೇಲಿರುವ ಆಸಕ್ತಿ, ಮೋಹಗಳನ್ನು ತ್ಯಾಗ ಮಾಡುವುದೆಂದರೆ ನಿಜವಾಗಿಯೂ ತ್ಯಾಗದ ಉಚ್ಚ ಪರಾಕಾಷ್ಠತೆಯನ್ನು ತಲುಪಿದಂತೆ. ಸನ್ಯಾಸಿಗಳಾದರೋ ವಸ್ತ್ರದ ತ್ಯಾಗವನ್ನು ಮಾಡುವರು. ಕೆಲವರಂತೂ ದಿಗಂಬರರಾಗಿ ಅಥವಾ ನಗ್ನರಾಗಿಯೇ ಇದ್ದು ಬಿಡುತ್ತಾರೆ. ಬಹುಪಾಲು ಜನರು ಇದನ್ನು ಅತಿ ಉಚ್ಚ ತ್ಯಾಗವೆಂದು ಪರಿಗಣಿಸುವರು. ವಾಸ್ತವವಾಗಿ ಯಾವುದು ಆತ್ಮಕ್ಕೆ ಹೊದಿಕೆ ಅಥವಾ ವಸ್ತ್ರವಾಗಿದೆಯೋ ಆ ಶರೀರದ ಭಾವನೆಯಿಂದ ಆತ್ಮವು ದೂರವಿರುವುದು (detach)— ಇದು ಸರ್ವೋಚ್ಚ ಸನ್ಯಾಸವಾಗಿದೆಯೇ ಹೊರತು ಹತ್ತಿಯಿಂದಾದ ಬಟ್ಟೆಯಿಂದ ದೂರವಿರುವುದಿಲ್ಲ. ದೈಹಿಕವಾದ

ಆಯುಸ್ಸು, ಅಂತಸ್ತು, ಜಾತಿ ಮೊದಲಾದವುಗಳ ಅಭ್ಯಾಸ, ಅಥವಾ ಭಾವನೆಯನ್ನು ತ್ಯಾಗಮಾಡಿ ಸದಾಕಾಲ ಆತ್ಮ ಸ್ಮೃತಿಯಲ್ಲಿ ಸ್ಥಿತರಾಗಿರುವುದು ಮತ್ತು ಇತರರನ್ನೂ ಆತ್ಮಿಕ ದೃಷ್ಟಿಯಲ್ಲಿ ಸಹೋದರ–ಸಹೋದರ ಸಂಬಂಧ ದಿಂದ ನೋಡುವುದು—ಇದೇ ಅದ್ಭುತ ಸನ್ಯಾಸವಾಗಿದೆ.

## ಅಶುದ್ಧ ಸಂಕಲ್ಪ—ವಿಕಲ್ಪಗಳ ತ್ಯಾಗ

ಐದನೆಯದಾಗಿ ವ್ಯರ್ಥ ಅಥವಾ ಅಶುದ್ಧ ಸಂಕಲ್ಪ ವಿಕಲ್ಪಗಳ ತ್ಯಾಗ ವಾಗಿದೆ. ಈ ತ್ಯಾಗವು ಅತಿ ಉನ್ನತಮಟ್ಟದ್ದಾಗಿದೆ. ಇತರರ ಅವಗುಣಗಳನ್ನು ನೋಡುತ್ತಿದ್ದರೂ ಇತರರ ದೋಷಗಳು ಗೊತ್ತಾದರೂ ಅಥವಾ ಇತರರ ಮೇಲಿನ ನಿಂದೆಯನ್ನು ಕೇಳಿದರೂ ಅವುಗಳನ್ನು ಚಿತ್ತದಲ್ಲಿಡಬಾರದು; ಹಳೆಯ ಹಾಗೂ ದುಷ್ಟ ಸಂಕಲ್ಪಗಳನ್ನು ತ್ಯಜಿಸಬೇಕು. ಅಜ್ಞಾನಕಾಲದ ದೃಷ್ಟಿ ವೃತ್ತಿ ಮತ್ತು ರೀತಿ–ನೀತಿಗಳನ್ನು ತ್ಯಾಗಮಾಡಬೇಕು. ವ್ಯರ್ಥಸಂಕಲ್ಪಗಳಲ್ಲಿ ಮನಸ್ಸು ವಿಹರಿಸುವುದನ್ನು ತಡೆಯಬೇಕು—ಇದೇ ಪರಮ ಶಾಂತಿಯನ್ನು ಕೊಡುವ ಪರಮಹಂಸ ತ್ಯಾಗವಾಗಿದೆ. ಇದರಲ್ಲಿಯೇ ಅಶುದ್ಧ ಇಚ್ಛೆ, ವಾಸನೆ ತೃಷ್ಣೆ ಇವುಗಳ ತ್ಯಾಗವು ಸಮ್ಮಿಳಿತವಾಗಿದೆ. ಭಕ್ತಿಮಾರ್ಗದಲ್ಲಾದರೋ ಮನುಷ್ಯನು ಮಂದಿರದಿಂದ ವಾಪಸು ಬಂದು ಪುನಃ ಅಶುದ್ಧ ಸಂಕಲ್ಪ ವಿಷಯ ಗಳಲ್ಲಿ ಮುಳುಗುವನು; ಆದರೆ ಸನ್ಯಾಸ ಮಾರ್ಗದಲ್ಲಿ ಅವನು ವಿಷಯಗಳಿಂದ ದೂರವಿದ್ದು ಇಚ್ಛೆಗಳನ್ನು ದಮನ ಮಾಡುವನು. ಈ ಈಶ್ವರೀಯ ಜ್ಞಾನಮಾರ್ಗದಲ್ಲಿ ಅಥವಾ ಪರಮಹಂಸ ಮಾರ್ಗದಲ್ಲಿ ವಿಷಯ ಪದಾರ್ಥಗಳನ್ನು ಇಚ್ಛಾ ಮಾತ್ರದಿಂದ ತ್ಯಾಗಮಾಡುವುದು ಹಾಗೂ ಅವುಗಳಿಂದ ನಿರ್ಲಿಪ್ತ ರಾಗಿರುವುದು ಇದೆಂತಹ ದೊಡ್ಡ ತ್ಯಾಗ.

## ಸರ್ವ ಆಧಾರಗಳ ತ್ಯಾಗ

ಆರನೆಯದಾಗಿ ಸರ್ವ ಸಂಸಾರಿಕ ಆಧಾರಗಳ ತ್ಯಾಗ. ಮನುಷ್ಯನು ಸಂಸಾರದಲ್ಲಿ ಅನೇಕ ಆಧಾರಗಳನ್ನು ಮಾಡಿಟ್ಟುಕೊಂಡಿದ್ದಾನೆ. ಒಬ್ಬನು ಹೀಗೆ ಆಲೋಚಿಸುವನು – ‘ ನನ್ನ ಮಿತ್ರನು ಕೇಂದ್ರ ಸರ್ಕಾರದಲ್ಲಿ ದೊಡ್ಡ

ಅಧಿಕಾರದಲ್ಲಿ ನಿಯುಕ್ತನಾಗಿದ್ದಾನೆ. ಸರ್ಕಾರದಿಂದ ನನಗೇನಾದರೂ ತೊಂದರೆ ಬಂದಲ್ಲಿ ನಾನು ಅವನ ಆಧಾರವನ್ನು ಪಡೆಯಬಹುದು." ಮತ್ತೊಬ್ಬನು "ನನಗೆ ಮೂವರು ಮಕ್ಕಳಿದ್ದಾರೆ ಎಲ್ಲರೂ ಧನವನ್ನು ಸಂಪಾದಿಸುವ ಅವಸ್ಥೆಯಲ್ಲಿದ್ದಾರೆ. ನನ್ನ ವೃದ್ಧಾಪ್ಯದಲ್ಲಿ ಅವರೇ ಆಧಾರವು." ಎಂಬುದಾಗಿ ಯೋಚಿಸುತ್ತಾನೆ. ಈ ಪ್ರಕಾರವಾಗಿ ಒಬ್ಬನು ಒಂದು ರೀತಿಯಲ್ಲಿ ಇನ್ನೊಬ್ಬನು ಬೇರೊಂದು ರೀತಿಯಲ್ಲಿ ಅವರ ಸಹಾಯವನ್ನೇ ಅಪೇಕ್ಷಿಸಿಕುಳಿತಿದ್ದಾರೆ. ಆದರೆ ಯಾರು **ಸರ್ವಸ್ವ ತ್ಯಾಗಿಗಳಾಗಿರುವರೋ** ಅವರು ಏಕಮಾತ್ರ ಆತ್ಮಬಲ ಮತ್ತು **ಒಬ್ಬ ಈಶ್ವರನ ಭರವಸೆಯ ಮೇಲೆ** ನಿಂತಿರುತ್ತಾರೆ. ಅವರ ಆಧಾರವು ಒಬ್ಬ ಪರಮಪಿತ ಪರಮಾತ್ಮನಲ್ಲಿ ಮತ್ತು ಆತನು ಕೊಟ್ಟಿರುವ ದಿವ್ಯಜ್ಞಾನ ಮತ್ತು ಯೋಗ ಹಾಗೂ ದಿವ್ಯಗುಣಗಳೇ ಆಗಿರುತ್ತದೆ. ಅವರು ತಮ್ಮನ್ನು ಈಶ್ವರಾರ್ಪಣರೆಂದು ತಿಳಿದು, ತಮ್ಮ ಶರೀರವನ್ನು ತನ್ನದೆಂದು ತಿಳಿಯದೆ ಅದು ಪ್ರಭುವಿನ ಸಂಕಲ್ಪದಿಂದ ಬಂದಿದೆಯೆಂದು ಪರಿಗಣಿಸುವರು. ಅವರು ಸಂಸಾರದ ಅನೇಕ ವ್ಯಕ್ತಿಗಳ ಸಹಯೋಗದಿಂದ ಕಾರ್ಯ ಮಾಡುವರಾದರೂ ಅವರ ಯೋಗವು ಒಬ್ಬ ಪರಮಪಿತ ಶಿವನಲ್ಲಿಯೇ ಇರುತ್ತದೆ; ಅವರ ಅನವರತವಾದ ನಿಶ್ಚಯವು ಆ ಸರ್ವ-ಸಮರ್ಥ ಪ್ರಭುವಿನಲ್ಲಿಯೇ ಇರುತ್ತದೆ. ಸನ್ಯಾಸಿಗಳು ಸರ್ವಸ್ವವನ್ನೂ ತ್ಯಾಗಮಾಡಿದರೂ ತಾವು ಧರಿಸಿರುವ ಕಾವಿವಸ್ತ್ರ, ಕೌಪೀನ ಮತ್ತು ದಂಡವನ್ನು ತಮ್ಮವೆಂದು ಭಾವಿಸುವರು. ಫಕೀರರೂ ಸಹ ತಾವು ಕೈಯಲ್ಲಿ ಹಿಡಿದಿರುವ ಲಾಟಿಯನ್ನು ತಮ್ಮ ವಸ್ತುವೆಂದು ತಿಳಿಯುವರು. ಆದರೆ ಪರಮಪಿತ ಶಿವನು ಕಲಿಸಿರುವ ಸತೋಪ್ರಧಾನ ತ್ಯಾಗದ ಅನುಸಾರವಾಗಿ ನಡೆಯುವವರು, **ಸಂಪೂರ್ಣ ರೀತಿಯಲ್ಲಿ ಪ್ರಭುವಿಗೆ ಅರ್ಪಣರಾಗುವುದೇ** ವಾಸ್ತವಿಕ ತ್ಯಾಗವೆಂದು ಒಪ್ಪುವರು ಮತ್ತು ಸರ್ವಸ್ವವೂ ಪ್ರಭುವಿನಿಂದ ದೊರಕಿದೆಯೆಂದು ಪರಿಗಣಿಸುವರು. **ಅವರು ಉಳಿದ ಸಂಗಗಳನ್ನು ತ್ಯಾಗ ಮಾಡಿ ಒಂದೇ ಒಂದು ಸತ್ಯಸಂಗವನ್ನು ಮಾಡುವರು.** "ಮಾಮೇಕಂ ಶರಣಂ ವ್ರಜ" ಎಂಬ ಪ್ರಭುವಿನ ಆಜ್ಞೆಯನ್ನು ಪಾಲನೆಮಾಡುತ್ತಾ ಅವರು ಸರ್ವಸ್ವ ತ್ಯಾಗಿಗಳಾಗುವರು.

## ಬುದ್ಧಿಯ ಅಭಿಮಾನದ ತ್ಯಾಗ

ಏಳನೆಯದಾಗಿ ತನ್ನ ಬುದ್ಧಿಯ ಅಭಿಮಾನದ ತ್ಯಾಗ. ನೀವೇ ನೋಡಿರುವಂತೆ ಸನ್ಯಾಸಿಗಳು ಗೃಹಸ್ಥಧರ್ಮವನ್ನು ತ್ಯಾಗಮಾಡಿದ ಮೇಲೆ ತಮ್ಮ ಪಾಂಡಿತ್ಯದ, ವಿದ್ವತ್ತಿನ, ಶಾಸ್ತ್ರೀಯ ಜ್ಞಾನದ ಅಥವಾ ತಮ್ಮ ತರ್ಕಶೀಲತೆಯ ಅಥವಾ ಬುದ್ಧಿಯ ಅಭಿಮಾನದಲ್ಲಿರತೊಡಗುವರು. ಒಂದು ವೇಳೆ ಯಾರಾದರೂ ಅವರ ಮಾತನ್ನು ಒಪ್ಪದಿದ್ದರೆ ಅವರಿಗೆ ಕ್ರೋಧವು ಬರುತ್ತದೆ. ಏಕೆಂದರೆ ಅವರು ತಮ್ಮನ್ನು ಶ್ರೇಷ್ಠರೆಂದು ತಿಳಿದಿರುತ್ತಾರೆ. ಎಲ್ಲವನ್ನು ತ್ಯಾಗ ಮಾಡಿದ್ದರೂ "ಶ್ರೀಶ್ರೀ ೧೦೮ ಜಗದ್ಗುರು" ಎಂಬ ಉಪಾಧಿಯನ್ನು ಹಾಗೂ ಸ್ಥಾನಮಾನ-ಮರ್ಯಾದೆಗಳನ್ನು ಸ್ವೀಕಾರ ಮಾಡತೊಡಗುವರು. ಹೀಗಾಗಿ ಅವರು ತಮ್ಮ ತ್ಯಾಗದ ಮೇಲೆ ನೀರೆರಚುವರು. ಆದ್ದರಿಂದ ಬುದ್ಧಿಯ ತ್ಯಾಗವೂ ಅತ್ಯಾವಶ್ಯಕವಾದುದು. ನಾವು ಅಂಧಶ್ರದ್ಧಾಳುಗಳಾಗಿರಬೇಕೆಂಬುದು ಇದರ ಅರ್ಥವಲ್ಲ. ತಾನು ಇತರರಿಗಿಂತಲೂ ಅತಿ ಬುದ್ಧಿವಂತನೆಂಬ ಭಾವನೆ ಅಥವಾ ಸೂಕ್ಷ್ಮರೂಪದ ಜಂಭವನ್ನು ತ್ಯಾಗಮಾಡಿ ತನ್ನನ್ನು ಒಬ್ಬ ವಿದ್ಯಾರ್ಥಿ ಅಥವಾ ಪುರುಷಾರ್ಥಿಯೆಂದು ತಿಳಿಯಬೇಕು.

ಎಂಟನೆಯದು ವಿಚಿತ್ರಪ್ರಕಾರದ ತ್ಯಾಗ. ಕೆಲಜನರು ಸರ್ವಪ್ರಕಾರದ ತ್ಯಾಗವನ್ನು ಮಾಡಿದಮೇಲೂ ತಮ್ಮ ಸ್ವಲ್ಪ ಅಧಿಕಾರವನ್ನು ತೋರ್ಪಡಿಸುವುದನ್ನು ನೀವು ನೋಡಿರಬಹುದು. ಉದಾಹರಣೆಗೆ ಒಬ್ಬ ವ್ಯಕ್ತಿಯು ತನ್ನ ಸರ್ವಸ್ವವನ್ನೂ ಯಾವುದೋ ಈಶ್ವರೀಯ ಸೇವಾರ್ಥವಾಗಿ ಕೊಟ್ಟನೆನ್ನೋಣ. ಅದು ಈಗ ಯಾರ ಬಳಿಯಲ್ಲಿರುತ್ತದೆಯೋ ಅವರಿಂದ ಆ ವ್ಯಕ್ತಿಗೆ ಊಟ-ಉಪಚಾರ, ನಿವಾಸ ಇತ್ಯಾದಿ ಮೇಲ್ತರದ ಅನುಕೂಲಗಳು ಸಿಗದಿದ್ದರೆ ವೈಮನಸ್ಯದಿಂದ ಅಷ್ಟು ತ್ಯಾಗಮಾಡಿದುದನ್ನೆಲ್ಲಾ ಗಣನೆಗೆ ತೆಗೆದುಕೊಂಡು ಬೇಸರಪಡುವನು. ಇದರಿಂದ ಸ್ಪಷ್ಟವಾಗುವುದೇನೆಂದರೆ ಆ ವ್ಯಕ್ತಿಯು ಏನನ್ನು ತ್ಯಾಗಮಾಡಿದನೋ **ಆ ತ್ಯಾಗದ ಅಭಿಮಾನವನ್ನೇ ತ್ಯಾಗಮಾಡಿಲ್ಲ.** ಆದ್ದರಿಂದ ಸರ್ವೋತ್ತಮ ತ್ಯಾಗ ಯಾವುದೆಂದರೆ ಯಾವುದರ ಬಗ್ಗೆಯೇ ಆಗಲಿ ಮನುಷ್ಯನು ತನ್ನ ಮನದಲ್ಲಿ ಅಭಿಮಾನವನ್ನಿಡಲಾಗದು, ಬಾಯಿಂದ ಹೇಳ

ಲಾಗದು ಮತ್ತು ಆ ತ್ಯಾಗಕ್ಕೆ ಪ್ರತಿಫಲವನ್ನು ಅಪೇಕ್ಷಿಸಲಾಗದು. ತ್ಯಾಗದ ಆಧಾರದಿಂದ ತನ್ನ ಅಧಿಕಾರವನ್ನು ತೋರ್ಪಡಿಸಿಕೊಳ್ಳಲಾಗದು, ತ್ಯಾಗದ ಮಹತ್ವವನ್ನು ಇತರರಿಗೆ ಹೇಳಬೇಕಾದರೆ ತ್ಯಾಗದ ವರ್ಣನೆಯನ್ನು ಮಾಡಲಿ ಅಥವಾ ತ್ಯಾಗದ ಪ್ರಾಯೋಗಿಕ ಉದಾಹರಣೆಯನ್ನು ಕೊಡಲೋಸುಗ ತನ್ನ ಉದಾಹರಣೆಯನ್ನೇ ಕೊಡಲಿ, ಆದರೆ ವರ್ಣನೆ ಮಾಡುವ ಸಮಯದಲ್ಲಿ ಅವನು ಆ ತ್ಯಾಗದ ಆಧಾರದಿಂದ ಇತರರು ತನ್ನನ್ನು ಸನ್ಮಾನಿಸಲೆಂಬ ಅಥವಾ ಪ್ರಶಂಸೆ ಮಾಡಲೆಂಬ ಇಚ್ಛೆಯನ್ನಿಡದಿರಲಿ ಮತ್ತು ಅವನ ಮನಸ್ಸಿನಲ್ಲಿ ತನ್ನ ಪುರುಷಾರ್ಥದ ಹೆಗ್ಗಳಿಕೆಯ ಸೂಕ್ಷ್ಮಭಾವನೆಯೂ ಇರದಿರಲಿ. ಒಂದು ವೇಳೆ ತ್ಯಾಗದ ಕಾರಣದಿಂದ ಜನರು ಅವನನ್ನು ಪ್ರಶಂಸಿಸಿ ಸನ್ಮಾನಿಸಿದರೂ ಸಹ ಅವನು ಅದನ್ನು ಮನಸ್ಸಿನಿಂದ ಸ್ವೀಕರಿಸದಿರಲಿ.

ಈ ಎಂಟು ಪ್ರಕಾರದ ತ್ಯಾಗವನ್ನು ಯಾರು ಮಾಡುವರೋ ಅವರೇ ಸಂಪೂರ್ಣ ರೂಪದಲ್ಲಿ ಪ್ರಭುವಿನ ಸಾಮೀಪ್ಯವನ್ನು ಪಡೆಯುವರು ಮತ್ತು ಪ್ರಭುವೂ ಸಹ ಸಂಪೂರ್ಣರೂಪದಲ್ಲಿ ಅವರನ್ನು ಮೆಚ್ಚುವನು. ಅಂತಹವರೇ ಸಂಪೂರ್ಣ ಶಾಂತಿ, ಆನಂದವನ್ನು ಪಡೆಯುವರು.

**ಜಿಜ್ಞಾಸು —** ಸಹೋದರಿಯವರೇ, ತ್ಯಾಗದ ಈ ಮಧುರ ಚರ್ಚೆಯನ್ನು ಕೇಳುತ್ತಿದ್ದಾಗ ನನಗೆ ಒಂದು ರೀತಿಯ ಅಲೌಕಿಕ ಸುಖದ ಮತ್ತು ಸತ್ಯಶಾಂತಿಯ ಅನುಭವವಾಗುತ್ತಿತ್ತು; ಇನ್ನು ಯಾರು ಪ್ರಾಯೋಗಿಕವಾಗಿ ಪೂರ್ಣತ್ಯಾಗವನ್ನು ಮಾಡುವರೋ ಅವರ ಆನಂದಾನುಭೂತಿಯನ್ನು ಹೇಳುವುದಾದರೂ ಏನು! ಯಾವಾಗ ಅವರ ಮನಸ್ಸಿನಲ್ಲಿ ಯಾವುದೇ ಅವಗುಣ–ದುರ್ಗುಣ, ಅಶುದ್ಧ ಸಂಕಲ್ಪ–ವಿಕಲ್ಪ ಅಥವಾ ದೇಹ ಮತ್ತು ಸಂಸಾರದ ಸ್ಮೃತಿಯೇ ಇರುವುದಿಲ್ಲವೋ ಆಗ ನಿಶ್ಚಯವಾಗಿ ಅವರು ಶಾಂತಿಯ ಉಯ್ಯಾಲೆಯಲ್ಲಿ ಓಲಾಡುತ್ತಿರುತ್ತಾರೆ. ಸರ್ವಸ್ವ ತ್ಯಾಗದ ಅವಸ್ಥೆ ಯೆಂದಬರುವ ಆತ್ಮಿಕ ಸುಖದ ಸ್ಥಿತಿಯು ಪ್ರಾಪ್ತವಾದ ಮೇಲೆ ನಿಸ್ಸಂದೇಹವಾಗಿ ಅವರ ಹರ್ಷಕ್ಕೆ ಎಲ್ಲೆಯೇ ಇರುವುದಿಲ್ಲ. ಆದ್ದರಿಂದ ಸಹೋದರಿಯವರೇ. ನನಗೆ ತಾವು ಸರ್ವಸ್ವ ತ್ಯಾಗಿಯ ಲಕ್ಷಣಗಳನ್ನೂ ಹೇಳಿರಿ ಮತ್ತು ಉಚ್ಚ ತ್ಯಾಗಿಯಾಗಲು

ಮಾಡಬೇಕಾದ ಪುರುಷಾರ್ಥವನ್ನೂ ವಿವರಿಸಿ ಹೇಳಿರಿ. ಇದರಿಂದ ನಾನೂ ಸಹ ತ್ಯಾಗದ ವಿಷಯದಲ್ಲಿ ಆಳವಾಗಿ ಯೋಚಿಸಿ ಅದನ್ನು ನನ್ನದನ್ನಾಗಿ ಮಾಡಿಕೊಳ್ಳು ವಂತಾಗಲಿ ಯಾರು ತ್ಯಾಗಿಗಳಲ್ಲವೋ ಅವರ ಚಿನ್ಹೆಗಳನ್ನೂ ಹೇಳಿರಿ.

## ಬುದ್ಧಿಯ ಅಭಿಮಾನದ ತ್ಯಾಗ ಮಾಡದಿರುವವರ ಲಕ್ಷಣ.

**ಬ್ರಹ್ಮಕುಮಾರಿ**—ಯಾವ ಮನುಷ್ಯನು ಬುದ್ಧಿಯ ಅಭಿಮಾನದ ತ್ಯಾಗ ವನ್ನು ಮಾಡಿಲ್ಲವೋ ಅವನು ಮಾತು ಮಾತಿಗೂ ಹೀಗೆ ಹೇಳುತ್ತಾನೆ—'ನನಗೆ ಎಲ್ಲವೂ ಗೊತ್ತಿದೆ. ನನ್ನನ್ನು ನೀವು ಏನೆಂದು ತಿಳಿದಿರುವಿರಿ? ನಾನೇನು ದಡ್ಡನೇ?' ಬುದ್ಧಿಯ ಅಭಿಮಾನವನ್ನು ತ್ಯಾಗಮಾಡಿಲ್ಲದ ವ್ಯಕ್ತಿಯು ತನ್ನ ಪ್ರತಿಯೊಂದು ಮಾತನ್ನೂ ಸಿದ್ಧಮಾಡಲು ಯತ್ನಿಸುವನು. ಅವನು ತನ್ನ ಮಾತನ್ನೇ ಒತ್ತಿಹೇಳುವನು, ಅದನ್ನು ಸ್ಪಷ್ಟಪಡಿಸಲು ಮತ್ತು ಮೆಚ್ಚಿಸಲು ಯತ್ನಿ ಸುವನು, ಜನರು ಅದನ್ನು ಒಪ್ಪದಿದ್ದರೆ ಬೇಸರಗೊಳ್ಳುವನು, ಅವರನ್ನು ಮೂರ್ಖ ರೆಂದು ಕರೆಯುವನು ಮತ್ತು ಇತರರ ಮಾತಿಗೆ ಹೆಚ್ಚು ಗಮನಕೊಡುವುದಿಲ್ಲ, ಮತಭೇದ ಸ್ಥಿತಿಯನ್ನು ಹುಟ್ಟಿಸುವನು, ಕಲಹ ಕ್ಲೇಶದ ವಾತಾವರಣವನ್ನು ಹರಡುವನು. ಈ ಪ್ರಕಾರವಾಗಿ ಲೋಕ-ಸಂಗ್ರಹದ ವಿರುದ್ಧವಾಗಿ ಕಾರ್ಯ ಮಾಡುವನು. ಯಾವನಲ್ಲಿ ಎಷ್ಟೆಷ್ಟು ಬುದ್ಧಿಯ ಅಭಿಮಾನವಿದೆಯೋ ಅವನಲ್ಲಿ ಅಷ್ಟಷ್ಟೇ ಸ್ಥಾನ ಮತ್ತು ಮಾನಗಳ ಹಸಿವು ಇರುತ್ತದೆ. ಅವನು ಯಾವ ಕರ್ಮವನ್ನು ಮಾಡುವನೋ ಅದರಲ್ಲಿ ಲೋಕ-ಕಲ್ಯಾಣದ ಹಾಗೂ ಸೇವೆಯ ಭಾವನೆಯು ಅಲ್ಪವಾಗಿದ್ದು ಸ್ಥಾನ-ಮಾನ ಅಥವಾ ಆತ್ಮಪ್ರತಿಷ್ಠೆಯ ಭಾವನೆ ಯು ಅಧಿಕವಾಗಿರುತ್ತದೆ. ಸ್ಥಾನ ಮಾನಗಳು ದೊರೆತಾಗ, ಜನರು ಮೆಚ್ಚಿಗೆ ಸೂಚಿಸಿದಾಗ ಅವನು ಹರ್ಷಿತನಾಗಿರುವನು. ಸ್ಥಾನ ಮಾನಗಳು ದೊರೆಯ ದಿದ್ದಾಗ ಅವನ ಸಭ್ಯಾವ, ಸ್ಥಿತಿ, ಚರ್ಯೆಗಳೇ ಬದಲಾಗಿ ಬಿಡುತ್ತವೆ; ಸಹ ಯೋಗ ನಿಂತುಹೋಗುತ್ತದೆ; ಸಂಬಂಧ ದೂರವಾಗಿ ಬಿಡುತ್ತದೆ. ಸರ್ವ ಪ್ರಕಾರದ ತ್ಯಾಗವನ್ನು ಮಾಡಿದನಂತರವೂ ಮನುಷ್ಯನು ಬುದ್ಧಿಯ ಅಭಿಮಾನದ ತ್ಯಾಗವನ್ನು ಮಾಡದಿದ್ದರೆ ಅವನ ಈ ಅಭಿಮಾನ ಶೇಷವು ಸರ್ವ ಪ್ರಕಾರದ ತ್ಯಾಗವನ್ನೂ ಮುಚ್ಚಿಬಿಡುತ್ತದೆ ಅಥವಾ ಜನತೆಯ ದೃಷ್ಟಿಗೆ ಬೀಳದಂತಾಗು

ತ್ತದೆ ಮತ್ತು ಈ ಕಾರಣದಿಂದ ಜನ ಮನಸ್ಸಲ್ಲಿ ಅವನ ಮಹಾನತೆಯು ಇರುವುದಿಲ್ಲ

**ಬುದ್ಧಿಯ ಅಭಿಮಾನವನ್ನು ತ್ಯಾಗ ಮಾಡುವುದು ಹೇಗೆ ?**

ಯಾರಲ್ಲಿ ಈ ಪ್ರಕಾರದ ಬುದ್ಧಿಯ ಅಹಂಕಾರವಿದೆಯೋ ಅವನು ಆಲೋಚಿಸ ಬೇಕಾದುದೇನೆಂದರೆ—'ನನ್ನ ಬುದ್ಧಿಯು ಮೊದಲಿಗೆ ಸರ್ವಥಾ ವ್ಯತಿರಿಕ್ತವಾಗಿತ್ತು ಈಗ ಪರಮ ಪಿತ ಪರಮಾತ್ಮ ಶಿವನು ನನ್ನ ಬುದ್ಧಿಯನ್ನು ಪರಿವರ್ತಿಸಿದ್ದಾನೆ. ತಮೋಪ್ರಧಾನ ಅಥವಾ ಆಸುರೀತನದಲ್ಲಿದ್ದ ನನ್ನ ಬುದ್ಧಿಯನ್ನು, ದಿವ್ಯ ಬುದ್ಧಿ ವಿಧಾತ, ಚಿಂತಾಮಣಿ, ಪರಮಪಿತ ಶಿವನು ಸ್ಪರ್ಶ ಮಣಿಯನ್ನಾಗಿ ಮಾಡು ತ್ತಿರುವನು. ಪರಮಾತ್ಮನೇ ಎಲ್ಲರಿಗೂ ಸದ್ಬುದ್ಧಿಯನ್ನು ಕೊಡುವವನು ಅವನು ನನಗೆ ಈಶ್ವರೀಯ ಜ್ಞಾನ ಅಥವಾ ಸರಿಯಾದ ತಿಳುವಳಿಕೆಯನ್ನು ಕೊಟ್ಟಿ ರುವನು. ಈಗ ನಾನು ದ್ವಿಜನ್ಮ ಅರ್ಥಾತ್ ಹಿಂದಿನದೆಲ್ಲವನ್ನೂ ಮರೆತು ತಂದೆ ಶಿವನಿಂದ ಹೊಸ ಜನ್ಮವನ್ನು ಪಡೆಯಬೇಕು. ಒಂದು ವೇಳೆ ನಾನು ಬುದ್ಧಿ ಯನ್ನು ಅವನ ವಶಕ್ಕೆ ಕೊಡದಿದ್ದರೆ ಅವನು ನನ್ನನ್ನು ಸ್ಪರ್ಶಮಣಿಯನ್ನಾಗಿ ಮಾಡುವುದಾದರೂ ಹೇಗೆ? ನನ್ನ ಬುದ್ಧಿಯ ಅಹಂಕಾರದಲ್ಲಿಯೇ ನಾನಿದ್ದರೆ ಬುದ್ಧಿಯು ಬದಲಾಗುವುದು ಹೇಗೆ ಮತ್ತು ಅಭಿವೃದ್ಧಿಯಾಗುವುದು ಹೇಗೆ ? ಆದ್ದರಿಂದ ನಾನೀಗ ಬುದ್ಧಿಯ ಸ್ವಾಭಿಮಾನವನ್ನೂ ತ್ಯಾಗ ಮಾಡಬೇಕು ಮತ್ತು ಪೂರ್ಣ ರೀತಿಯಲ್ಲಿ ಶ್ರೀಮತದಂತೆ ನಡೆಯಬೇಕು ಅರ್ಥಾತ್ ತಂದೆಯಿಂದ ಸಿಕ್ಕಿ ರುವ ಜ್ಞಾನ ಮತ್ತು ದಿವ್ಯ ಮರ್ಯಾದೆಯ ಅನುಸಾರವಾಗಿ ಕರ್ಮಮಾಡಬೇಕು. ನಾನು ಈಗೀಗ ಕಲಿಯುತ್ತಿರುವೆನು. ನಾನಿನ್ನೂ ಸಂಪೂರ್ಣನಾಗಿಲ್ಲ. ನನ್ನ ಸ್ವಂತ ಬುದ್ಧಿಯಿಂದ ನನ್ನ ಕಲ್ಯಾಣವಾಗಲಿಲ್ಲ. ಇಲ್ಲದಿದ್ದಲ್ಲಿ ನಾನೇಕೆ ತಮೋ ಪ್ರಧಾನ ಅವಸ್ಥೆಗೆ ಬರಬೇಕಿತ್ತು ? ಆದ್ದರಿಂದಲೇ ಶಿವತಂದೆ ಹೇಳುವಂತೆ —" **ಈಗ ನಿರಕ್ಷರ ಕುಕ್ಷಿಯಾಗು ಮತ್ತು ಮೌನಿಯಾಗು** ಅರ್ಥಾತ್ ಮನುಷ್ಯರ ಮೂಲಕ ಮೊದಲು ಏನೇನು ಓದಿದೆಯೋ, ಕಲಿತೆಯೋ ಅದೆಲ್ಲವನ್ನೂ ಮರೆ. ಮತ್ತು ಈಗ ನಾನು ಏನನ್ನು ಕಲಿಸುವೆನೋ ಅದನ್ನು ಕಲಿ. ಇದಕ್ಕೂ ವ್ಯತಿರಿಕ್ತವಾಗಿ ಹಿಂದಿನ ದೇಹಾಭಿಮಾನದ ವಿದ್ಯೆಯ ಆಧಾರದಿಂದ ಕಪ್ಪೆಯಂತೆ ಈಗ ಟ್ರಾ ಟ್ರಾ ಎನ್ನ ಬೇಡ, ಅಭಿಮಾನದ ಮಾತನ್ನೇ ಆಡಬೇಡ ಶಾಂತ ನಾಗಿರು, ಮನಸ್ಸನ್ನೂ ಮೌನವಾಗಿಟ್ಟಿರು. ಮನಸ್ಸಿನಿಂದ ಸಾಂಸಾರಿಕ ಸಂಕ ಲ್ಪಗಳನ್ನು ತ್ಯಾಗ ಮಾಡು. ನನ್ನಿಂದ ಕಲ್ಯಾಣಕಾರಿ ಜ್ಞಾನವನ್ನು ಆರ್ಜಿಸು.

"ನಾನು ಇಂತಹ ವಿದ್ಯೆಯನ್ನು ಕಲಿತಿರುವೆನು, ಇಂತಹ ಅನುಭವಿಯಾಗಿರುವೆನು, ಇದೆಲ್ಲವೂ ನನಗೆ ಗೊತ್ತಿದೆ". ಎಂಬ ಮಿಥ್ಯಾಭಿಮಾನವನ್ನು ಬಿಟ್ಟು ಬುದ್ಧಿಯ ಸಂಗವನ್ನು ಅನೇಕ ಕಡೆಗಳಿಂದ ತೆಗೆದು ನನ್ನೊಬ್ಬನಲ್ಲಿ ನೆಲೆಗೊಳಿಸು". ಈ ಪ್ರಕಾರದ ಶಿವತಂದೆಯ ಶಿಕ್ಷಣವನ್ನು ಜ್ಞಾಪಿಸಿಕೊಂಡು ಬುದ್ಧಿಯ ಅಭಿಮಾನ ವನ್ನು, ಆಕ್ರೋಷವನ್ನು, ಹಠಮಾರಿ ಸ್ವಭಾವವನ್ನು ಕತ್ತೆಯ ತಲೆಯೆಂದು ತಿಳಿದು ಇದನ್ನು ತ್ಯಾಗಮಾಡಬೇಕು. ಏಕೆಂದರೆ ಇದು ಮನುಷ್ಯನನ್ನು ಅಸುರನನ್ನಾಗಿ ಮಾಡುತ್ತದೆ. ರಾವಣನಂತೆ ರಾಮನಿಂದ ವಿಮುಖ ಹಾಗೂ ವಿಪರೀತವನ್ನಾಗಿ ಮಾಡುತ್ತದೆ ಮತ್ತು ವಿನಾಶದತ್ತ ಸೆಳೆದೊಯ್ಯುವ ಅವಗುಣವಾಗಿದೆ.

**ಜಿಜ್ಞಾಸು**—ಸಹೋದರಿಯವರೇ, ತುಚ್ಛಬುದ್ಧಿಯ ಅಭಿಮಾನ ಪಡು ವುದೆಂದರೆ ನಿಜವಾಗಿಯೂ ಕೆಟ್ಟದ್ದು. ಈ ಚಂಚಲ ಮತ್ತು ಆಕ್ರೋಷ ಬುದ್ಧಿಯೇ ನಮ್ಮನ್ನು ಬೇಸರಪಡಿಸಿತು ಮತ್ತು ದುರ್ಗತಿಯ ಹಳ್ಳಕ್ಕೆ ತಳ್ಳಿತು. ಈಗಲೂ ಸಹ ಈ ಬುದ್ಧಿಯನ್ನು ಲಗಾಮಿಲ್ಲದೆ ಬಿಟ್ಟಲ್ಲಿ ಏನುಗತಿಯಾಗಬಹುದು? ಸತ್ಯವಾಗಿಯೂ ಆವಶ್ಯವಾಗಿ ಇದರ ತ್ಯಾಗಮಾಡಬೇಕು.

## ಬುದ್ಧಿಯ ಅಭಿಮಾನದ ತ್ಯಾಗದಿಂದಲೇ ಇತರ ದಿವ್ಯಗುಣಗಳ ಧಾರಣೆ

**ಬ್ರಹ್ಮಾಕುಮಾರಿ**—ಹೌದು, ಯಾವಾಗ ಮನುಷ್ಯನು ತನ್ನ ಬುದ್ಧಿಯ ಅಭಿಮಾನವನ್ನು ಬಿಟ್ಟು ಈ ಈಶ್ವರೀಯ ವಿದ್ಯೆಯನ್ನು ನಿಯಮಪೂರ್ವಕವಾಗಿ ಅಭ್ಯಸಿಸುವನೋ ಮತ್ತು ಬುದ್ಧಿಯ ಲಗಾಮನ್ನು ಪರಮಪಿತ ಶಿವನ ಕೈಗೆ ಕೊಡುವನೋ ಆಗ ಅವನಲ್ಲಿ ಇತರ ಸದ್ಗುಣಗಳು ಬೆಳೆಯಲು ಪ್ರಾರಂಭವಾಗು ತ್ತವೆ. ಗಾಳಿಪಟದ ದಾರವು ಕೈಯಲ್ಲಿದ್ದರೆ ಮಾತ್ರ ಅದನ್ನು ಹಿಡಿತದಲ್ಲಿಟ್ಟು ಕೊಳ್ಳಬಹುದು. ಹಾಗೆಯೇ ಯಾವ ಆತ್ಮನ ಬುದ್ಧಿಯ ಹಗ್ಗವು ಪರಮಾತ್ಮನ ಕೈಯಲ್ಲಿರುತ್ತದೆಯೋ ಅವನು ಮಾಯೆಯೆಂಬ ಬಿರುಗಾಳಿಯಲ್ಲಿಯೂ ಸುರಕ್ಷಿತ ವಾಗಿರುತ್ತಾನೆ. ಆದ್ದರಿಂದ ಸರ್ವಪ್ರಕಾರದ ತ್ಯಾಗವನ್ನೂ ಸುಗಮವಾಗಿಡಲು 'ನಾನು, ನಾನು' ಎಂಬುದರ ಮತ್ತು ತನ್ನ ಅರಿವೇ ದೊಡ್ಡದೆಂಬ ತಿಳುವಳಿಕೆಯ

ತ್ಯಾಗಮಾಡಿ ತನ್ನನ್ನು ಒಬ್ಬ ವಿದ್ಯಾರ್ಥಿಯೆಂದು ಪರಿಗಣಿಸಬೇಕಾದುದು ಅನಿವಾರ್ಯ ಮತ್ತು ಪರಮಪಿತ ಪರಮಾತ್ಮನಲ್ಲಿ ಪ್ರೀತಿಬುದ್ಧಿ ಇರಬೇಕಾದುದೂ ಅತ್ಯಾವಶ್ಯಕ. ಇಲ್ಲದಿದ್ದಲ್ಲಿ ವಿಪರೀತ ಭಾವನೆಯು ತ್ಯಾಗಮಾಡದಿದ್ದವರ ನಾಶ ನಿಶ್ಚಿತ. ಯಾವ ಮನುಷ್ಯನು ಬುದ್ಧಿಯ ಅಭಿಮಾನದ ತ್ಯಾಗಮಾಡಿರುವನೋ ಅವನಿಗೆ ಯಾವುದೇ ಈಶ್ವರೀಯ ವಿಷಯವನ್ನು ತಿಳಿಸುವುದು ಸುಲಭ. ಬುದ್ಧಿಯ ಅಭಿಮಾನವಿರುವ ಮನುಷ್ಯನಿಗೆ ಸಂಶೋಧನೆ (correction) ನೀಡುವುದು ಕಷ್ಟ. ಏಕೆಂದರೆ ಅವನು "ಓದಿ ಓದಿ ಮರುಳಾದ" ಎಂಬಂತಾಗಿರುತ್ತಾನೆ. ಅವನು ಎಲ್ಲವನ್ನೂ ತಿಳಿದಿದ್ದರೂ ಅದರಂತೆ ನಡೆಯುವುದಿಲ್ಲ ಮತ್ತು ಅಹಂಕಾರವು ಅವನ ಮನಸ್ಸನ್ನು ಆವರಿಸಿರುವುದು. ಅಂತಹ ವ್ಯಕ್ತಿಯೊಡನೆ ಜನರು ಮಾತನಾಡಲೂ ಹಿಂಜರಿಯುವರು. ಏಕೆಂದರೆ ಅಂತಹ ಸ್ವಾಭಿಮಾನಿಗಳಿಗೆ ಯಾವುದೇ ಬುದ್ಧಿವಾದವನ್ನು ತಿಳಿಸಿದರೂ ಹೇಳಿದವರ ಮೇಲೆಯೇ ಕ್ರೋಧಗೊಳ್ಳುವರು. ಈ ಬುದ್ಧಿಯ ಅಭಿಮಾನವು ಇಂತಹ ಕೆಟ್ಟವಸ್ತುವಾಗಿ ಮನುಷ್ಯನನ್ನು ಕಲಿಯಲು ಮತ್ತು ತಿಳಿಯಲು ಬಿಡುವುದಿಲ್ಲವಾದ್ದರಿಂದ ಇದನ್ನು ಆಳವಾಗಿ ಗುಂಡಿಯಲ್ಲಿ ಪುನಃ ಎದ್ದು ಬರದಂತೆ ಮುಚ್ಚಿಬಿಡಬೇಕಾಗಿದೆ ಅಥವಾ ಈಗಲೇ ಇದನ್ನು ಕಟ್ಟಿ ಪುನಃ ಮನದಲ್ಲಿ ಈಜಿಕೊಂಡು ಬರದಂತೆ ಸಮುದ್ರದ ತಳಕ್ಕೆ ತಲುಪಿಸಿಬಿಡಬೇಕು ಈ ಅಭಿಮಾನ ಮತ್ತು ಚಂಚಲ ಬುದ್ಧಿಯು ಯಮನ ಭಯಂಕರ ರೂಪವನ್ನು ತೋರಿಸುವಂತಹದ್ದು, ಮನುಷ್ಯನನ್ನು ಮಂಗನಂತೆ ಮಾಡಿದುದೂ ಸಹ ಇದೇ-ಆಗಿರುವಾಗ ಈ ಮಂಗತನದ ತ್ಯಾಗವನ್ನು ಮಾಡುವುದಕ್ಕೂ ಅಲಕ್ಷ್ಯ ಮಾಡಬೇಕೇ? ಈ ಬುದ್ಧಿಯ ಅಭಿಮಾನವೇ ನಮ್ಮ ನರನಾಡಿಗಳನ್ನೆಲ್ಲಾ ಒಂಟೆಯ ಕತ್ತಿನಂತೆ ವಕ್ರಮಾಡಿತು ಅರ್ಥಾತ್ ನಮ್ಮ ನಡೆ-ನುಡಿ, ಆಚಾರ-ವಿಚಾರವೆಲ್ಲವನ್ನೂ ಹಾಳುಮಾಡಿತು. ಈಗಲೂ ಸಹ ಈ ವಕ್ರನಡೆಯನ್ನು ಬಿಡದಿದ್ದರೆ ನಾವು ಸ್ವರ್ಗಕ್ಕೆ ಹೋಗಲು ಸಾಧ್ಯವಿಲ್ಲ. ಏಕೆಂದರೆ ಸ್ವರ್ಗದಲ್ಲಿ ವಕ್ರನಡತೆಯುಳ್ಳವರಿರುವಂತಿಲ್ಲ.

**ಜಿಜ್ಞಾಸು**-ಸಹೋದರಿಯರೇ, ಈಗ ನನ್ನ ಬುದ್ಧಿಯು ಒಬ್ಬ ಪ್ರಭುವಿನ ಸಂಗವನ್ನೇ ಮಾಡುವುದು ಮತ್ತು ನಾನು ಆ ಪ್ರಭುವಿನ ಶ್ರೇಷ್ಠಮತದಂತೆಯೇ ನಡೆಯುವೆನು. ಇನ್ನು ನಾನು ನಿಶ್ಚಯವಾಗಿ ಮನಮತ ಅಥವಾ ನನ್ನಬುದ್ಧಿಯ

ಅಭಿಮಾನಿಯಾಗಿ ನಡೆಯುವುದಿಲ್ಲ. ಬುದ್ಧಿಯು ಅಭಿಮಾನದ ತ್ಯಾಗ ಮಾಡು ತ್ತೀನೆ. ಆದರೆ ದೇಹಾಭಿಮಾನದ ತ್ಯಾಗ, ದೇಹಸಂಬಂಧಗಳ ಮಾನಸಿಕತ್ಯಾಗ ಮತ್ತು ಕರ್ಮೇಂದ್ರಿಯ ಮೊದಲಾವುಗಳಲ್ಲಿನ ಆಸಕ್ತಿಯನ್ನು ಹೇಗೆ ತ್ಯಾಗ ಮಾಡಬೇಕೆಂಬುದನ್ನು ವಿವರಿಸಿ ಹೇಳಿರಿ.

**ಬ್ರಹ್ಮಾಕುಮಾರ್**—ಈ ಕಲಿಯುಗದ ಸಂಸಾರವು ಪೂರ್ಣವಾಗಿ ಅಸಾರ ವೆಂಬುದನ್ನು ತಾವು ತಿಳಿದಿರುವಿರಾ? ಕಬ್ಬಿನಿಂದ ರಸವನ್ನು ತೆಗೆದಮೇಲೆ ಅದರ ಸಿಪ್ಪೆಯನ್ನು ಜೀಪುವುದುಂಟೇ? ಇದೇ ರೀತಿಯಲ್ಲಿ ಈ ಸಂಸಾರದಲ್ಲಿ ಸತ್ ಅಥವಾ ಸತ್ವವು ಉಳಿದಿಲ್ಲ, ತಮೋಪ್ರಧಾನವಾಗಿದೆ. ಎಲ್ಲ ವಸ್ತುಗಳೂ ದುಃಖದಾಯಕ ವಾಗಿವೆ. ಈ ಶರೀರಕ್ಕಂತೂ ಅನೇಕ ರೋಗಗಳು ಅಂಟಿಕೊಂಡಿವೆ. ಇದು ತಮೋಗುಣ ಪ್ರಕೃತಿಯಿಂದಾದುದು ಮತ್ತು ಕಾಮವಿಕಾರದಿಂದ ಹುಟ್ಟಿದು ದಾಗಿದೆ. ಈ ದುರ್ಗಂಧಮಯ ಪತಿತ ದೇಹದ ಅಭಿಮಾನವಿಡುವುದು ಅಥವಾ ಕರ್ಮೇಂದ್ರಿಯಗಳ ತಮೋಪ್ರಧಾನವಾದ ನಿಸ್ಸಾರ ವಿಷಯಗಳಲ್ಲಿ ಆಸಕ್ತರಾಗಿ ಸ್ವರ್ಗದ ರಾಜ್ಯ-ಭಾಗ್ಯವನ್ನು ಕಳೆದುಕೊಳ್ಳುವುದು ಎಂದರೆ ಮಹಾ ಮೂರ್ಖತೆ ಯಲ್ಲದೆ ಮತ್ತೇನು? ಈ ಮಣ್ಣಿನ ಹಿಂದೆ ಬಿದ್ದು ಜೀವನ್ಮುಕ್ತಿಯನ್ನು ಕಳೆದು ಕೊಂಡರೆ ಯಮಧರ್ಮನ ನೇಣುಗಂಬದಲ್ಲಿ ನೇತುಬಿದ್ದಂತಲ್ಲದೆ ಮತ್ತೇನು! ಇದೇನು ಬುದ್ಧಿವಂತಿಕೆಯೆ? ಆದ್ದರಿಂದ ಕರ್ಮೇಂದ್ರಿಯಗಳ ವಿಷಯಾಸಕ್ತಿ ಯನ್ನು ಅಥವಾ ತೃಷ್ಣೆಯನ್ನು ಇದೇ ಕ್ಷಣದಲ್ಲಿ ಬಿಟ್ಟುಬಿಡಬೇಕು. ಇಲ್ಲದಿದ್ದಲ್ಲಿ ತನ್ನ ವಜ್ರಸಮಾನ ಜೀವನವನ್ನು ಹಾಳುಮಾಡಿಕೊಳ್ಳಬೇಕಾದೀತು.

## ದೇಹಾಭಿಮಾನದ ಅನೇಕ ರೂಪ

ದೇಹಾಭಿಮಾನವೂ ಸಹ ಒಂದೇ ರೂಪದಲ್ಲಿ ಬರುವುದಿಲ್ಲ. ಇದಕ್ಕೆ ಅನೇಕ ರೂಪಗಳಿವೆ. ದೇಹಾಭಿಮಾನಿಯ ಒಂದು ಲಕ್ಷಣವೆಂದರೆ ಅವನು ತಾನೇ ದೇಹ ವೆಂಬ ಸೀಮಿತದಲ್ಲಿಯೇ ಇರುತ್ತಾನೆ. ಪ್ರತಿಯೊಂದು ಮಾತಿನಲ್ಲಿಯೂ ಸಂಕು ಚಿತ ಮನೋಭಾವವುಳ್ಳವನಾಗಿರುತ್ತಾನೆ. ಉದಾಹರಣೆಗೆ ಅವನು ಇಡೀ ದಿನವೆಲ್ಲಾ ತನ್ನ ಲೌಕಿಕ ಮನೆಯಲ್ಲಿ ಹಾಗೂ ಸಂಬಂಧಿಗಳೊಡನೆಯೇ ಮುಳು

ಗಿರುತ್ತಾನೆ. ಪ್ರಪಂಚವೇ ತನ್ನ ಮನೆ. ಮಾನವ ಕುಲವೇ ತನ್ನ ಕುಟುಂಬ, ಇವರಿಗಾಗಿ ತನ್ನ ಕೆಲವು ಕರ್ತವ್ಯಗಳಿವೆ ಎಂಬ ವಿಷಯವು ಅವನ ಮನ, ವಚನ, ಕರ್ಮಗಳಲ್ಲಿ ಕಂಡುಬರುವುದಿಲ್ಲ. ಬೆಳಗಿನಿಂದ ಸಂಜೆಯವರೆಗೆ ತನ್ನ ಚಿಕ್ಕ ಗೃಹಸ್ಥ ಧರ್ಮದ ಸೇವೆಯಲ್ಲಿ ಹಾಗೂ ದೈಹಿಕ ದೃಷ್ಟಿಯಿಂದ ತನ್ನ ಪಾಲನೆ ಪೋಷಣೆಯಲ್ಲಿ ಕಾಲಕಳೆಯುವನು. ತನು, ಮನ, ಧನದಿಂದ ತನ್ನ ಉನ್ನತಿಯನ್ನೂ ಮಾಡಿಕೊಳ್ಳಬೇಕು ಮತ್ತು ಈ ನನ್ನ ವಿಶ್ವರೂಪದ ಕುಟುಂಬಕ್ಕಾಗಿಯೂ ತನ್ನದೇ ಆದ ಸ್ವಲ್ಪ ಕರ್ತವ್ಯವನ್ನು ಮಾಡಬೇಕೆಂಬ ವಿಚಾರದಿಂದ ಅವನು ಪೂರ್ಣ ವಿಮುಖನಾಗಿರುತ್ತಾನೆ. ಇತರರೊಡನೆ ಬೆರೆತು, ಸಹಯೋಗಿಯಾಗಿ ಕಾರ್ಯ ಮಾಡಲು ಸಂಕೋಚಗೊಳ್ಳುವನು. 'ಇದು ನನ್ನದು ಅದು ನಿನ್ನದು' ಎಂದು ಭೇದವೆಣಿಸುವ ಮನುಷ್ಯನು ಎಂದಿಗೂ ಸಹ ಅಪಾರ ಸಂತೋಷ ಹಾಗೂ ಸೀಮಾತೀತವಾದ ಈಶ್ವರೀಯ ಸಂಪತ್ತು ಅಥವಾ ಸತ್ಯಯುಗದ ಸೃಷ್ಟಿಯಲ್ಲಿನ ಸವಿಸ್ತಾರವಾದ ರಾಜ್ಯ-ಭಾಗ್ಯವನ್ನು ಪಡೆಯಲಾರನು. ಅಂತಹ ವ್ಯಕ್ತಿಯು ಅಖಂಡ ಸ್ವರಾಜ್ಯದ ಒಡೆಯನಾಗಲು ಸಾಧ್ಯವೆ? ಇದನ್ನು ತಿಳಿದು ಮನುಷ್ಯನು ಅಂತಹ ದೇಹಾಭಿಮಾನವನ್ನು ತ್ಯಾಗಮಾಡಬೇಕು. ಎಲ್ಲಕ್ಕಿಂತ ಮೊದಲು ಮನುಷ್ಯನು ತನ್ನ ಗಮನ ಮತ್ತು ಕರ್ಮಗಳೆಲ್ಲವನ್ನೂ ತನ್ನ ದೇಹಕ್ಕೇ ಮೀಸಲಾಗಿಟ್ಟಿರುವ ಎಲ್ಲೆ ಕಟ್ಟೆನಿಂದ ಹೊರಕ್ಕೆ ಬರಬೇಕು ಹಾಗೂ ದೇಹದ ಸಂಬಂಧಿಗಳಿಗಾಗಿಯೇ ತನ್ನ ಜೀವನವನ್ನು ವ್ಯಯಮಾಡುವ ಮೇರೆಯನ್ನು ಮೀರಿ ಬಂದು, ಲೋಕಕಲ್ಯಾಣಾರ್ಥವ ... ಸು, ಮನ, ಧನ, ಮತ್ತು ಸಮಯವನ್ನು ಕಳೆಯುವುದರಲ್ಲಿ ತತ್ಪರರಾಗಬೇಕಾ...ದೆ. ಯಾರು ಆ ರೀತಿ ಮಾಡುವುದಿಲ್ಲವೋ ಅಂತಹವರು ದೇಹಾಭಿಮಾನ...ನ್ನೂ ತ್ಯಾಗ ಮಾಡಿಲ್ಲ ಮತ್ತು ದೈಹಿಕ ಸಂಬಂಧಿಗಳ ಬಗೆಗಿರುವ ಮಮತ್ವದ ಮಾನಸಿಕ ತ್ಯಾಗವನ್ನೂ ಮಾಡಿಲ್ಲವೆಂದು ಅರ್ಥ. ಅಂತಹ ಮನುಷ್ಯನ ಮನಸ್ಸು ಪದೇಪದೇ ತನ್ನ ಮನೆ ಮತ್ತು ಸಂಬಂಧಿಗಳ ಕಡೆಗೇ ಓಡುತ್ತಿರುತ್ತದೆ ಏಕೆಂದರೆ ಅವನು ಮೋಹದ ತ್ಯಾಗ ಅಥವಾ ಮಮತ್ವದ ಸನ್ಯಾಸ ಮಾಡಿರುವುದಿಲ್ಲ. ಈಶ್ವರನಲ್ಲಿ ಹಾಗೂ ಈಶ್ವರೀಯ ಪರಿವಾರದಲ್ಲಿ ಅವನಿಗೆ ಆತ್ಮೀಯ ಸಂಬಂಧದ ಪ್ರೀತಿಯಿರುವುದಿಲ್ಲ, ಹೀಗಾಗಿ ಈ ಅಂತಿಮ-ಜನ್ಮದಲ್ಲಿ ಕೇವಲ ಈ ಅತ್ಯಲ್ಪವಾದ ತ್ಯಾಗವನ್ನು ಮಾಡದೆ ಇದ್ದುದರ ಪರಿಣಾಮ

ವಾಗಿ ಮನುಷ್ಯನು ದೌರ್ಭಾಗ್ಯಶಾಲಿಯಾಗುವನು. ನೋಡಿದಿರಾ. ಈ ದೇಹಾಭಿಮಾನವು ಎಂತಹ ಹಾನಿಕಾರಕವಾದುದು! ಈ ಪ್ರಕಾರವಾಗಿ ತನಗೆ ತಾನೇ ತಿಳಿದುಕೊಂಡು ಈಗ ಎಂತಹ ಪರಿಸ್ಥಿತಿಗಳೇ ಬರಲಿ, ದೇಹ ಮತ್ತು ದೇಹದ ಸಂಬಂಧಿಗಳಿಂದ ತನ್ನನ್ನು ಬಿಡುಗಡೆಮಾಡಿಕೊಂಡು ತನ್ನ ಹಾಗೂ ಲೋಕ ಕಲ್ಯಾಣಕ್ಕಾಗಿ ದುಡಿಯಬೇಕು. ಮತ್ತು ತನ್ನ ದೈಹಿಕ ಮಿತ್ರ-ಸಂಬಂಧಿಗಳಲ್ಲಿ, ಪಿತಾ-ಪುತ್ರರಲ್ಲಿ ಎಷ್ಟು ಪ್ರೀತಿಯಿದೆಯೋ ಅದಕ್ಕಿಂತಲೂ ಹೆಚ್ಚಾಗಿ ಅಂತರ್ಯದಿಂದ ಹೊರಹೊಮ್ಮಿದ ಪ್ರೀತಿಯು ಪರಮಪಿತ ಪರಮಾತ್ಮನ ಮೇಲೆ ಹಾಗೂ ತನ್ನ ಅಲೌಕಿಕ ಪರಿವಾರದ ಮೇಲೆ ಇರಬೇಕು. ಪುತ್ರನನ್ನು ಪಿತನು ತನ್ನ ಉತ್ತರಾಧಿಕಾರಿಯಾಗಿಮಾಡುವಂತೆ ಪರಮಾತ್ಮನಲ್ಲಿ ಪುತ್ರರೂಪದ ಸಂಬಂಧವನ್ನು ಬೆಳೆಸದಿದ್ದರೆ ಅವನು ಅಳೆಯಲಾರದ ಸುಖ-ರಾಶಿಯ ಅಧಿಕಾರಿಯಾಗಲು ಸಾಧ್ಯವೆ ?

## ಲೋಕ-ಲಜ್ಜೆಯನ್ನು ತ್ಯಾಗಮಾಡಲು ಯುಕ್ತಿ

ನಾಚಿಕೆ, ಲೋಕ-ಲಜ್ಜೆ, ಸಂಕೋಚ, ನಿಂದಾಸ್ತುತಿ, ಮಾನಾಪಮಾನ, ಜಯಪರಾಜಯ ಇವುಗಳಿಂದ ಪ್ರಭಾವಿತರಾಗುವುದು-ಇವೇ ಮೊದಲಾದವುಗಳು ದೇಹಾಭಿಮಾನದ ವಿಭಿನ್ನ ರೂಪಗಳು. ಒಂದುವೇಳೆ ದೇಹಾಭಿಮಾನವನ್ನು ತ್ಯಾಗಮಾಡಿ—"ನಾನು ಒಂದು ಜ್ಯೋತಿಬಿಂದು ಆತ್ಮ. ಸರ್ವಶಕ್ತಿವಂತ, ತ್ರಿಕಾಲದರ್ಶಿ, ಕಲ್ಯಾಣಕಾರಿ ತಂದೆ ಶಿವನ ಮತದಂತೆ ನಡೆಯುತ್ತಿದ್ದೇನೆ" ಎಂಬ ಸ್ಮೃತಿಯಲ್ಲಿ ಮಗ್ನನಾದರೆ ಆ ಲೋಕಲಜ್ಜೆ ಮತ್ತು ನಿಂದಾಸ್ತುತಿಗಳಿಂದ ಪ್ರಭಾವಿತನಾಗುವುದಿಲ್ಲ.

## ಅಶುದ್ಧ ಸಂಕಲ್ಪ-ವಿಕಲ್ಪಗಳನ್ನು ತ್ಯಾಗಮಾಡಲು ಯುಕ್ತಿ

ಇದೇ ಪ್ರಕಾರವಾಗಿ ಮನುಷ್ಯನ ಮನದಲ್ಲಿ ಏಳುವ ಅನೇಕ ಪ್ರಕಾರದ ಇಚ್ಛೆ, ತೃಷ್ಣೆ ಅಥವಾ ಸಂಕಲ್ಪ ವಿಕಲ್ಪಗಳನ್ನೂ ತ್ಯಾಗಮಾಡಬೇಕು. ಈ ಪುರುಷೋತ್ತಮ ಸಂಗಮಯುಗದ ಅತ್ಯಮೂಲ್ಯ ಸಮಯವನ್ನು ಅಶುದ್ಧ ಸಂಕಲ್ಪ-ವಿಕಲ್ಪಗಳಲ್ಲಿ ಹಾಗೂ ಇವುಗಳೊಡನೆ ಘೋರ ಯುದ್ಧಮಾಡುವುದರಲ್ಲೇ ವ್ಯಯಮಾಡಿದರೆ ವಿಕಾರಗಳ ಮೇಲೆ ವಿಜಯಗಳಿಸಿದ ಹಾಗೂ

ಅತೀಂದ್ರಿಯ ಸುಖವನ್ನು ಅನುಭವಿಸುವ ಸಮಯವು ಬರುವುದುಯಾವಾಗ? ಆದ್ದರಿಂದ ಇವುಗಳಿಗೂ ತಡೆಹಾಕಬೇಕು. ನಿಮ್ಮ ಮನಸ್ಸು ಪ್ರಭುವಿನಲ್ಲಿ ನೆಲೆಸಿದ ಮೇಲೆ ಪುನಃ ಈ ಅಸುರರನ್ನು ಏಕೆ ಒಳ ನುಗ್ಗಿಸಬೇಕು.? ಈ ವಿಕಾರ ಹಾಗೂ ಅಶುದ್ಧ ಸಂಕಲ್ಪ–ವಿಕಲ್ಪಗಳನ್ನೂ ಪ್ರಭುವಿಗೆ ದಾನಮಾಡಿರುವುದರಿಂದ ಪುನಃ ಅವುಗಳನ್ನು ಏಕೆ ವಾಪಸ್ಸು ಪಡೆಯಬೇಕು? ದಾನವನ್ನು ವಾಪಸ್ಸು ಪಡೆದವನು ಚಂಡಾಲನಾಗುತ್ತಾನೆ. ಆದ್ದರಿಂದ ಇವುಗಳ ಮೇಲೆ ತೀಕ್ಷ್ಣವಾದ ದೃಷ್ಟಿಯನ್ನಿಟ್ಟು ಮನಸ್ಸಿನೊಳಗೆ ನುಗ್ಗದಂತೆ ನೋಡಿಕೊಳ್ಳಬೇಕು. ಏಕೆಂದರೆ ತ್ಯಾಗ ಅಥವಾ ಸನ್ಯಾಸ ಮಾಡಿದ ಮೇಲೆ ತ್ಯಾಗಮಾಡಿದ ವಸ್ತುವನ್ನು ಪುನಃ ಗ್ರಹಿಸಲಾಗುವುದಿಲ್ಲ.

ಒಂದು ವೇಳೆ ತಾವು ಇವುಗಳ ತ್ಯಾಗವನ್ನೇ ಮಾಡಿಲ್ಲದಿದ್ದರೆ ಇವುಗಳನ್ನು ತ್ಯಾಗಮಾಡುವುದು ಯಾವಾಗ ಅಥವಾ ತ್ಯಾಗಮಾಡುವುದರ ವಿಚಾರವೇ ಇಲ್ಲವೋ? ಎಂಬುದನ್ನು ಸ್ವಲ್ಪ ಆಲೋಚಿಸಿರಿ. ತ್ಯಾಗವನ್ನೇ ಮಾಡದಿದ್ದರೆ ಇವುಗಳನ್ನು ನಿಮ್ಮೊಡನೆ ಪರಂಧಾಮಕ್ಕೆ ಕೊಂಡೊಯ್ಯುವಿರೇನು? ಆ ಪರಂಧಾಮವು ಸಂಕಲ್ಪ–ವಿಕಲ್ಪಗಳಿಂದ ದೂರ, ಪೂರ್ಣ ಪವಿತ್ರ ಮತ್ತು ಪರಮ ಶಾಂತಿಯುತವಾದದ್ದರಿಂದ ಅಲ್ಲಿಗೆ ಇವುಗಳೊಡನೆ ಹೋಗುವಂತಿಲ್ಲ. ಯಾವುದು ಆದಿ–ಮಧ್ಯ–ಅಂತ್ಯ ದುಃಖವನ್ನು ಕೊಡುವುದೋ ಅದನ್ನು ಬಿಡಲು ನಿಮ್ಮ ಹೃದಯವಿದೀರ್ಣವಾಗುವುದೇಕೆ? ಈ ದುರ್ಗಂಧವನ್ನು ಎಲ್ಲಿಯವರೆಗೆ ನಿಮ್ಮೊಳಗೆ ಪಾಲಿಸುತ್ತಾ ವೃದ್ಧಿಪಡಿಸುವಿರಿ? ಹೊರಗಿನಿಂದ ಒಳ್ಳೆಯವರಂತೆ ನಟಿಸಿ ಒಳಗೆ ದುರ್ಗಂಧವನ್ನೇ ತುಂಬಿಕೊಂಡಿರುವುದನ್ನು ತಾವು ಹೇಗೆ ಸರಿ ಎಂದು ಯೋಚಿಸಿರುವಿರಿ? ಈ ಕಾರ್ಯವನ್ನು ಇಂದುಮಾಡದೆ ನಾಳೆಗೆಂದು ಏಕೆ ಬಿಟ್ಟಿರುವಿರಿ? ನಾಳೆಯವರೆವಿಗೂ ಜೀವಿಸಿರುವೆನೆಂಬ ನಂಬಿಕೆ ನಿಮಗಿದೆಯೇ? ಈ ಅಸಂಸ್ಕಾರಗಳು ಮತ್ತು ಅಶುದ್ಧ ಸಂಕಲ್ಪಗಳಿಂದ ಪೂರ್ಣ ರೀತಿಯಲ್ಲಿ ಬಿಡುಗಡೆ ಹೊಂದಲು ಸಮಯ ನಿರೀಕ್ಷಣೆ ಏಕೆ? ಈ ಕ್ಷಣದಿಂದಲಾದರೂ ಪುರುಷಾರ್ಥವನ್ನು ಮಾಡದಿದ್ದರೆ, ಮನಸ್ಸು ಬಹಳಷ್ಟು ಸಮಯ ಪವಿತ್ರ ಸಂಸ್ಕಾರಗಳಲ್ಲಿ ಹಾಗೂ ಶುದ್ಧ ಸಂಕಲ್ಪಗಳಲ್ಲಿ ಇರದಿದ್ದರೆ ಪವಿತ್ರತೆಯ ಧಾರಣೆಯು ಪಕ್ಕಾವಾಗುವುದು ಹೇಗೆ? ಒಂದು ವೇಳೆ ಈಗಲೇ ಇಲ್ಲಿಯೇ ಜ್ಞಾನ ಮತ್ತು

ಯೋಗದ ಬಲದಿಂದ ನಿಮ್ಮನ್ನು ನೀವು ಇವುಗಳಿಂದ ಬಿಡಿಸಿಕೊಳ್ಳದಿದ್ದರೆ ಮಹಾ ವಿನಾಶವಾದ ಮೇಲೆ ಧರ್ಮರಾಜನೇ ನಿಮ್ಮನ್ನು ಇವುಗಳಿಂದ ಬಿಡಿಸುವನು ಏಕೆಂದರೆ ಈಗ ಪರಮಾತ್ಮನು ಪವಿತ್ರ ಪ್ರಪಂಚವನ್ನು ಸ್ಥಾಪನೆ ಮಾಡಲು, ಈ ದುರ್ಗಂಧಮಯ ಸಂಕಲ್ಪ-ವಿಕಲ್ಪಗಳಿಂದ ನಿವೃತ್ತವಾದ ಪ್ರಪಂಚವನ್ನು ಸ್ಥಾಪನೆಮಾಡಲು ಮತ್ತು ಆತ್ಮಗಳನ್ನು ಪವಿತ್ರ ಸೃಷ್ಟಿಗೆ ಕರೆದೊಯ್ಯಲು ಬಂದಿರುವನು ಮತ್ತು ಅವನು ತನ್ನ ಕಾರ್ಯವನ್ನು ಮಾಡುತ್ತಿರುತ್ತಾನೆ. ಆದ್ದರಿಂದ ಒಂದು ವೇಳೆ ತಾವು ಅವನ ಶ್ರೀಮತದಂತೆ ನಡೆದು ಇವುಗಳ ತ್ಯಾಗ ಮಾಡಿದರೆ ತ್ಯಾಗದ ಫಲಸ್ವರೂಪ ನಿಮ್ಮ ಭಾಗ್ಯವಾಗುವುದು. ಈಶ್ವರೀಯ ಕಾರ್ಯದಲ್ಲಿನ ಸಹಯೋಗದ ಫಲಸ್ವರೂಪವಾಗಿ ರಾಜ್ಯ ಪದವಿಯೂ ಸಿಗು ವುದು. ನಿಮ್ಮ ಮನಸ್ಸಾಕ್ಷಿಯಿಂದ ಈ ಪುರುಷಾರ್ಥವನ್ನು ಮಾಡದಿದ್ದರೆ ಭವಿಷ್ಯದಲ್ಲಿಯೂ ಪದವಿಭ್ರಷ್ಟರಾಗುವುದಲ್ಲದೆ, ಇಲ್ಲಿಯೂ ಅತೀಂದ್ರಿಯ ಸುಖ ದಿಂದ ವಂಚಿತರಾಗಿ ಧರ್ಮರಾಜನ ಶಿಕ್ಷೆಗೆ ಗುರಿಯಾಗುವಿರಿ. ಆದ್ದರಿಂದ ತಾವು ಈಗಿಂದೀಗಲೇ ನಿಮ್ಮ ಭಾಗ್ಯದ ನಿರ್ಣಯಮಾಡಿರಿ. ಇಲ್ಲದಿದ್ದಲ್ಲಿ ನಿಮ್ಮ ಭಾಗ್ಯ ವನ್ನು ಮಾಡಿಕೊಳ್ಳಲು ಅವಕಾಶವು ಪುನಃ ಸಿಕ್ಕುವುದಿಲ್ಲ ಮತ್ತು ಪಶ್ಚಾತ್ತಾಪ ಪಡಬೇಕಾಗುತ್ತದೆ. ಇಷ್ಟು ದೊಡ್ಡ ಪ್ರಾಪ್ತಿಗಾಗಿ ಅತ್ಯಲ್ಪವಾದ ತ್ಯಾಗವನ್ನು ಮಾಡಲಾರಿರಾ? ಇಂತಹ ಅಗ್ಗದ ವ್ಯಾಪಾರ ಮಾಡುವುದೂ ನಿಮಗೆ ತಿಳಿಯದೇ? ನೋಡಿರಿ. ಇವುಗಳ ತ್ಯಾಗದಿಂದಲೇ ವರ್ತಮಾನ ಸಮಯದಲ್ಲಿ ನಿಸ್ಸಂಕಲ್ಪತೆ, ನಿರ್ವಿಕಲ್ಪತೆ, ಕರ್ಮಾತೀತಾವಸ್ಥೆ, ಅವ್ಯಕ್ತಾವಸ್ಥೆ ಮತ್ತು ಅತೀಂದ್ರಿಯ ಸುಖ ಇವುಗಳು ದೊರೆಯುತ್ತವೆ ಮತ್ತು ಭವಿಷ್ಯದಲ್ಲಿಯೂ ಮಹಾಸಾಮ್ರಾಜ್ಯದ ಪ್ರಭುತ್ವವೂ ಪ್ರಾಪ್ತಿಯಾಗುತ್ತವೆ.

## ಜ್ಞಾನದಿಂದ ನಿಶ್ಚಯ, ನಿಶ್ಚಯದಿಂದ ತ್ಯಾಗ, ತ್ಯಾಗದಿಂದ ಪ್ರಾಪ್ತಿ

ಈ ಪ್ರಕಾರವಾಗಿ ನಾನಿಂದು ತಿಳಿಸಿದ ಎಂಟು ಪ್ರಕಾರದ ತ್ಯಾಗವನ್ನು ಮಾಡಲು ಸುಲಭಸಾಧ್ಯವಾಗಬಹುದು. ಒಂದು ವೇಳೆ ಈ ಈಶ್ವರೀಯ ಜ್ಞಾನವೇ ಇಲ್ಲದಿದ್ದರೆ ಅಥವಾ ಆ ಜ್ಞಾನದಲ್ಲಿ ನಿಶ್ಚಯವೇ ಇಲ್ಲದಿದ್ದರೆ ತ್ಯಾಗಮಾಡುವುದ ಕ್ಕಾಗುವುದಿಲ್ಲ, ತ್ಯಾಗವಿಲ್ಲದಿದ್ದರೆ ಪ್ರಾಪ್ತಿಯೂ ಇಲ್ಲ. ತನಗೆ ಈ ಈಶ್ವರೀಯ

ಜ್ಞಾನದಲ್ಲಿ ಎಷ್ಟು ಶಕ್ತಿಗೆ ನಿಶ್ಚಯವಿದೆಯೆಂಬುದನ್ನು ಮನುಷ್ಯನು ಅರಿತು ನೋಡಿಕೊಳ್ಳಬೇಕಾಗಿದೆ. ನಿಶ್ಚಯವು ಕಡಿಮೆ ಇದ್ದಲ್ಲಿ ತ್ಯಾಗದಲ್ಲಿ, ಪುರುಷಾರ್ಥದಲ್ಲಿ ಮತ್ತು ಪ್ರಾಪ್ತಿಯಲ್ಲಿಯೂ ಕಡಿಮೆ ಇರುತ್ತದೆ. ಆದ್ದರಿಂದ ಜ್ಞಾನದ ತಳಹದಿಯನ್ನು ಸದೃಢವಾಗಿಟ್ಟುಕೊಂಡು ನಿಶ್ಚಯವನ್ನು ಪಕ್ಕಾಮಾಡಿಕೊಳ್ಳಬೇಕು. ಆಗ ಬುದ್ಧಿಯು ವಿಶಾಲವಾಗುತ್ತದೆ, ಚಿತ್ತ ಉದಾರವಾಗುತ್ತದೆ ಮತ್ತು ಮನಸ್ಸು ಮಹಾತ್ಯಾಗವನ್ನೇ ಮಾಡುತ್ತದೆ. ಏಕೆಂದರೆ ತ್ಯಾಗವು ವಾಸ್ತವಿಕವಾಗಿ ತ್ಯಾಗವಲ್ಲ. ಇದು ಜನ್ಮ-ಜನ್ಮಾಂತರಗಳಿಗೆ ಒಂದಕ್ಕೆ ಕೋಟಿಯಷ್ಟು ಅಧಿಕಪಾಲು ಪ್ರಾಪ್ತಿಯನ್ನು ಕೊಡುತ್ತದೆ ಈ ತ್ಯಾಗವು ಪ್ರತ್ಯಕ್ಷವಾಗಿ ಈಶ್ವರನ ಮತದಂತೆ ಮತ್ತು ಆತನಿಗಾಗಿ ಮಾಡುವುದಾದ್ದರಿಂದ ಆ ಅವಿನಾಶಿ ಶಿವ ಅಥವಾ ಸುಖದಾತನಿಂದ ಅಗಣಿತವಾಗಿಯೇ ಸಿಗುತ್ತದೆ—ಇದು ಒಂದು ನಿಯಮವೆಂಬುದನ್ನು ಬುದ್ಧಿಯು ಮನಸ್ಸಿಗೆ ಹೇಳುತ್ತದೆ. ಜ್ಞಾನವುಂಟಾದ ಮೇಲೆ ಈ ತ್ಯಾಗದ ಭಾವನೆಯು ಬರದೆ ಭವಿಷ್ಯದ ಬುದ್ಧಿಯನ್ನು ಮಾಡಿಕೊಳ್ಳಲು ತನ್ನನ್ನು ಪರಿವರ್ತಿಸಿಕೊಳ್ಳಲು ಸಾಧನಗಳನ್ನು ತನ್ನದನ್ನಾಗಿ ಮಾಡಿಕೊಳ್ಳಲು ಪುರುಷಾರ್ಥ ನಡೆಯತೊಡಗುವುದು ಮತ್ತು ಹೃದಯವಿದೀರ್ಣವಾಗುವ ಅಥವಾ ಗಾಬರಿಪಡುವುದಕ್ಕೆ ಬದಲಾಗಿ ಬಹಳ ಆನಂದವೂ ಆಗುತ್ತದೆ. ಒಂದು ಕಣವನ್ನು ಕೊಟ್ಟು ಅಪಾರ ರಾಶಿಯನ್ನು ಪಡೆಯುವಂತೆ ಅಥವಾ ಇದ್ದಕ್ಕಿದ್ದಂತೆ ಒಂದು ರೂಪಾಯಿಗೆ ಲಕ್ಷ ರೂಪಾಯಿಗಳ ಲಾಟರಿ ಹಣ ಸಿಕ್ಕಿದಂತೆ ಅಥವಾ ಕಾಸು ಕೊಟ್ಟು ಕೈಲಾಸ ಪಡೆದಂತೆ ಈ ತ್ಯಾಗವು ಪ್ರತಿಫಲಕೊಡುತ್ತದೆ.

## ಸರ್ವಸ್ವ ತ್ಯಾಗಿಯ ಲಕ್ಷಣ

ಯಾರು ಸರ್ವಸ್ವ ತ್ಯಾಗಿಗಳಾಗಿರುವರೋ ಅವರು ಸಂಕುಚಿತ ಭಾವನೆಗಳ ಕೋಟೆ ಅಥವಾ ಎಲ್ಲೆಯನ್ನು ಮೀರಿ ಹೊರಕ್ಕೆ ಬರುವರು. ಭಕ್ತಿಮಾರ್ಗದಲ್ಲಿ ಪಿತೃಗಳಿಗೆ ಜಲತರ್ಪಣ ನೀಡುವಾಗ "ಸರ್ವ ಆತ್ಮಗಳ ಕಲ್ಯಾಣಕ್ಕಾಗಿ" ಎಂದು ಹೇಳುವರು. ಆದರೆ ಸರ್ವಸ್ವ ತ್ಯಾಗಿಯು ಇಡೀ ಜೀವನವೆಲ್ಲಾ ಸರ್ವಆತ್ಮಗಳ ಕಲ್ಯಾಣಕ್ಕಾಗಿಯೇ ಇರುತ್ತದೆ. ಅವನು ಅಲೌಕಿಕ ಸೇವೆಗಾಗಿ ಸದಾತಯಾರಾಗಿರುತ್ತಾನೆ. ಏಕೆಂದರೆ ಈಗ ಅವನ ಶರೀರವು ಕೇವಲ ಅವನಿಗಾಗಿ ಮಾತ್ರವಲ್ಲ.

ಆದ್ದರಿಂದ ಅಲೌಕಿಕ ಸೇವೆಗಾಗಿ ಅವನು ಎಂದಿಗೂ ನಕಾರ ಹಾಕುವುದಿಲ್ಲ. ಅವನಿಗೆ ಯಾವಾಗಲಾದರೂ ಸ್ಥೂಲ ಅಥವಾ ಸೂಕ್ಷ್ಮವಾದ ಯಾವುದೇ ಕಾರ್ಯವನ್ನು ಕೊಟ್ಟರೂ ಅದು ತನ್ನ ಸೌಭಾಗ್ಯವೆಂದು ತಿಳಿದು ಸಹರ್ಷದಿಂದ ಮಾಡುವನು. ಅವನು ತನ್ನ ವಿಶ್ರಾಂತಿಯನ್ನೂ ಇತರರ ಸುಖಕ್ಕಾಗಿಯೇ ಉಪಯೋಗಿಸುವನು ಮತ್ತು ತನ್ನ ಆಯಾಸವನ್ನು ತೋರಿಸಿಕೊಳ್ಳದೆ ಈಶ್ವರೀಯ ಸೇವೆಗಾಗಿ ಸದಾ ಉತ್ಸಾಹಿತನಾಗಿರುವನು. ಈ ಪ್ರಕಾರವಾಗಿ ತ್ಯಾಗದ ಸ್ವರೂಪವನ್ನು ಮತ್ತು ಸತ್ಯತ್ಯಾಗದ ಲಕ್ಷಣಗಳನ್ನು ತಿಳಿದು ಈ ಸತ್ಯತ್ಯಾಗ ಮಾಡಲು ಹಾಗೂ ಉದಾರಚಿತ್ತನಾಗಿ ಈಶ್ವರೀಯ ಕಾರ್ಯದಲ್ಲಿ ಸಹಯೋಗಿಯಾಗಲು ಈಗ ಮಾತ್ರ ಅತ್ಯಮೂಲ್ಯ ಸಮಯವಾಗಿದೆ. ಆದರೆ ಈ ತ್ಯಾಗವು ಸಫಲ, ಸಬಲ ಹಾಗೂ ಸ್ಥಾಯಿಯಾಗಿರಲು ಉದಾರಚಿತ್ತರಾಗಬೇಕಾದುದೂ, ಈಶ್ವರೀಯ ಸೇವೆಯಲ್ಲಿ ತತ್ಪರರಾಗಿರುವುದೂ ಆವಶ್ಯಕವಾಗಿದೆ.

**ಜಿಜ್ಞಾಸು—**ಸಹೋದರಿಯವರೇ! ಇಂದು ಸತ್ಯತ್ಯಾಗದ ವಿಷಯದಲ್ಲಿ ಈ ಮಧುರಚರ್ಚೆಯೆಲ್ಲವನ್ನೂ ಕೇಳಿ ನನ್ನ ಮನದಲ್ಲಿ ನಿಸ್ಸಂಕಲ್ಪತೆ ಮತ್ತು ಸರಳತೆಯ ಅನುಭವವಾಗುತ್ತಿದೆ ಮತ್ತು ತ್ಯಾಗದ ಮೆಟ್ಟಿಲನ್ನು ಏರಿ ಲಕ್ಷ್ಯವನ್ನು ಮುಟ್ಟಲು ತೀವ್ರತರ ಹುರುಪು-ಉತ್ಸಾಹ ಉಂಟಾಗುತ್ತಿದೆ. ತಾವು ಹೇಳಿದ 'ಉದಾರಚಿತ್ತ' ಹಾಗೂ 'ಸೇವೆ'—ಈ ಎರಡು ಗುಣಗಳೂ ಅತಿ ಶ್ರೇಷ್ಠವಾದವುಗಳಲ್ಲವೆ ?

## ಔದಾರ್ಯ

**ಬ್ರಹ್ಮಾಕುಮಾರಿ—** ತ್ಯಾಗವನ್ನೂ ಸಹ ಉದಾರಚಿತ್ತ ವ್ಯಕ್ತಿಯೇ ಮಾಡಲು ಸಾಧ್ಯ; ಲೋಭಿಯಾದವನು ಏನು ತ್ಯಾಗಮಾಡಿಯಾನು? ಯಾವ ವ್ಯಕ್ತಿಯು ಉದಾರ-ಚಿತ್ತನಲ್ಲವೋ ಅವನು ತನ್ನ ತನು,-ಮನ,-ಧನಗಳನ್ನು ವ್ಯರ್ಥವಾಗಿ ಹಾಳುಮಾಡುವನು; ಪರೋಪಕಾರಾರ್ಥ, ಲೋಕಕಲ್ಯಾಣಾರ್ಥ ಅಥವಾ ಈಶ್ವರಾರ್ಥ ದಾನಮಾಡಿ ತನ್ನ ಭವಿಷ್ಯವನ್ನು ಶ್ರೇಷ್ಠಮಾಡಿಕೊಳ್ಳುವುದಿಲ್ಲ. ಆದ್ದರಿಂದ ತ್ಯಾಗವೆಂಬ ಮಹಾಗುಣವನ್ನು ನಿಮ್ಮದನ್ನಾಗಿ ಮಾಡಿ

ಕೊಳ್ಳಬೇಕಾದರೆ ಮೊದಲು ಉದಾರತೆಯ ಗುಣವನ್ನು ನೀವು ಧಾರಣೆಮಾಡಬೇಕು. ಅಲ್ಲದೆ ಈ ಸತೋಗುಣ ಹಾಗೂ ಮೇರೆಯಿಲ್ಲದ ತ್ಯಾಗಕ್ಕಾಗಿ ಅಪರಿಮಿತವಾದ ಉದಾರತೆಯೂ ಬೇಕು. ಯಾರು ಎಷ್ಟು ಉದಾರ-ಚಿತ್ತರಾಗುವರೋ, ಯಾರ ಹೃದಯವು ತ್ಯಾಗಕ್ಕಾಗಿ ಎಷ್ಟು ವಿಶಾಲವಾಗಿರುತ್ತದೆಯೋ ಅವರ ಭಾಗ್ಯವೂ ಅಷ್ಟೇ ಶ್ರೇಷ್ಠವಾಗುತ್ತದೆ. ಶ್ರೇಷ್ಠಭಾಗ್ಯವನ್ನು ತಂದು ಕೊಡುವ ಗುಣವು ಈ ಉದಾರತೆಯಲ್ಲಿದೆ. ಪೂರ್ಣ ಉದಾರತೆಯುಳ್ಳವರಾದರೆ ಭಾಗ್ಯವೂ ಪೂರ್ಣವಾಗುತ್ತದೆ.

## ಔದಾರ್ಯದ ಅನೇಕ ಪ್ರಕಾರಗಳು

ಉದಾರ ಹೃದಯರು ಅನೇಕ ಪ್ರಕಾರದವರಿರುತ್ತಾರೆ. ಕೆಲವರಂತೂ ಉದಾರತೆಯನ್ನು ತೋರಿಸಲು ತಡಮಾಡುವುದಿಲ್ಲ; ತಕ್ಷಣವೇ ಆಹುತಿಯಾಗುವರು ಮತ್ತೆ ಕೆಲವರು ಉದಾರತೆಯನ್ನು ತೋರ್ಪಡಿಸಲು ಸಾಕಷ್ಟು ಸಮಯ ತೆಗೆದುಕೊಳ್ಳುವರು. ತಡಮಾಡುವವರು ಸತ್ಯಯುಗದ ಸೃಷ್ಟಿಯಲ್ಲಿ ತಡವಾಗಿ ಬರುವರು ಅರ್ಥಾತ್ ಅಪಾರ ಸುಖವನ್ನನುಭವಿಸಲಾರರು ಅನೇಕರು ಉದಾರತೆ ತೋರಲು ಅಥವಾ ತ್ಯಾಗ ಮಾಡುವುದರಲ್ಲಿ ಬಹಳ ಯೋಚಿಸುತ್ತಿರುತ್ತಾರೆ ಮತ್ತು ಪ್ರಶ್ನಿಸುತ್ತಲೇ ಇರುತ್ತಾರೆ. ಇನ್ನು ಕೆಲವರು ಹೊರಗಿನಿಂದ ಉದಾರತೆಯನ್ನು ತೋರಿಸುವರು; ಮನದಲ್ಲಿ ಸ್ವಚ್ಛತೆಯಿರುವುದಿಲ್ಲ. ಅಂತಹವರು ಲೋಕಕಲ್ಯಾಣದ ಭಾವನೆಯಿಂದ ತ್ಯಾಗಮಾಡುವುದಿಲ್ಲ. ಅಂತಹವರು ತ್ರೇತಾಯುಗದ ಸೃಷ್ಟಿಯಲ್ಲಿ ನೋಡುವುದಕ್ಕೆ ವಿಶಾಲವಾಗಿದ್ದರೂ ಅಪಾರ ಸುಖರಾಶಿಯು ತುಂಬಿಲ್ಲದ ಸಮಯದಲ್ಲಿ ಬರುವರು. ಕೆಲವರಂತೂ ಉದಾರತೆಅಥವಾ ತ್ಯಾಗಕ್ಕಾಗಿ ಅಂತ್ಯದವರೆಗೆಅರ್ಥಾತ್ ಸೃಷ್ಟಿಯ ಮಹಾವಿನಾಶದವರೆಗೆ ಯೋಚಿಸುತ್ತಲೇ ಇರುತ್ತಾರೆ. ಅಂತಹವರಿಗೆ ಯಾವ ಫಲವನ್ನು ಕೊಡಬೇಕೆಂಬುದನ್ನು ಪರಮಾತ್ಮನೂ ಸಹ ಯೋಚಿಸಬೇಕಾಗುತ್ತದೆ............!

## ಔದಾರ್ಯಕ್ಕಾಗಿ ಯೋಚಿಸುವುದೇಕೆ ?

ಇದರಲ್ಲಿ ಹೆಚ್ಚು ಯೋಚಿಸಬೇಕಾದುದೇನೂ ಇಲ್ಲ ! ಯಾವಾಗ ಈ ವಿಷಯವು ಅರ್ಥವಾಗುವುದಿಲ್ಲವೋ, ಒಂದು ವೇಳೆ ಅರ್ಥವಾದರೂ ನಿಶ್ಚಯವಿರುವುದಿಲ್ಲವೋ ಆಗ ಯೋಚಿಸಬೇಕಾಗುತ್ತದೆ. ಈಗ ಸಮಯ ಎಂತಹದ್ದಾಗಿದೆ?

ನಮಗೆಇ ದೆಲ್ಲವನ್ನೂ ತಿಳಿಸುತ್ತಿರುವವರು ಯಾರು? ಏನು ಮಾಡಿದರೆ ಯಾವುದು ಪ್ರಾಪ್ತಿಯಾಗುತ್ತದೆ? ಎಂಬುದೆಲ್ಲವೂ ತಿಳಿದಿದೆ ಮತ್ತು ನಿಶ್ಚಯವೂ ಇದೆ. ಆಗ ಯೋಚಿಸಬೇಕಾದ ಪ್ರಮೇಯವೇ ಇರುವುದಿಲ್ಲ. ಯೋಚಿಸುವುದೂ ಸಹ ನಿಶ್ಚಯದ ಮತ್ತು ತಿಳುವಳಿಕೆಯ ಅಲ್ಪತೆಯೆಂಬುದು ಗೊತ್ತಾಗುತ್ತದೆ. ಅಥವಾ ವಿಷಯದ 'ಸ್ಪಷ್ಟತೆಯಿಲ್ಲವೆಂಬುದರ ಸೂಚಕವಾಗುತ್ತದೆ. ಇನ್ನೂ ಹೇಳುವುದಾದರೆ ನಮ್ಮ ಈ ಜೀವನವನ್ನು ಈ ಲೋಕ–ಸೇವಾರ್ಥಕ್ಕೆ ತೊಡಗಿಸಿ ಆತ್ಮಗಳ ಕಲ್ಯಾಣಕಾರ್ಯ ನಡೆಯುತ್ತಿರುವುದರಿಂದ ಇದಕ್ಕಾಗಿ ಯೋಚಿಸ ಬೇಕಾದ ಪ್ರಮೇಯವೇ ಇಲ್ಲ.

## ಈಶ್ವರೀಯ ಸೇವೆ

ಸೇವಾಧರ್ಮವನ್ನು ಪರಮ ಧರ್ಮವೆಂದು ಹೇಳಲಾಗಿದೆ. ಇತರರ ಸೇವೆ ಮಾಡುವುದೆಂದರೆ ಸೇವೆಮಾಡಿಸಿಕೊಂಡವರಿಗೂ ಸುಖವು ಸಿಗುವುದಲ್ಲದೆ ಮಾಡಿ ದವರಿಗೂ ಸುಖ ಸಿಗುತ್ತದೆ ಮತ್ತು ಇತರರ ಆಶೀರ್ವಾದವೂ ದೊರೆಯುತ್ತದೆ. ಈಶ್ವರೀಯ ಸೇವೆಗೆ ಮನುಷ್ಯನು ನಿಸ್ಸಂಕೋಚವಾಗಿ ಸೇರಿಕೊಳ್ಳಬೇಕಾಗಿದೆ. ಏಕೆಂದರೆ ಈ ಸೇವೆಯೇ ವಾಸ್ತವಿಕವಾಗಿ ಅವಿನಾಶಿ ಮತ್ತು ಅಕ್ಷಯವಾದ ಸಂಪಾದನೆಯಾಗಿದೆ. ಈಶ್ವರೀಯ ಸೇವೆಯಲ್ಲಿ ಬುದ್ಧಿಯನ್ನು ನಿರತಮಾಡು ವುದರಿಂದ ಸಂಕಲ್ಪ–ವಿಕಲ್ಪಗಳ ತ್ಯಾಗವು ಸ್ವತಃ ಸಹಜವಾಗಿ ಆಗುತ್ತದೆ. ಇಲ್ಲದಿದ್ದಲ್ಲಿ ಅವಕಾಶವುಳ್ಳ ಬುದ್ಧಿಯಲ್ಲಿ ಬಹಳ ಅಶುದ್ಧ ಸಂಕಲ್ಪಗಳು ಏಳುತ್ತವೆ. ಅಂತಹ ಸೇವೆ ಮಾಡುವುದರಿಂದ ಇತರರ ಆಶೀರ್ವಾದವೂ ದೊರೆತು, ತನ್ಮೂಲಕ ನಮ್ಮ ಆತ್ಮದ ಉನ್ನತಿಯೂ ಆಗುತ್ತದೆ. ಸೇವೆಯಿಂದಲೇ ಮನುಷ್ಯನಲ್ಲಿ ನಮ್ರತೆ, ಸಹನಶೀಲತೆ, ಸರಳತೆ ಮೊದಲಾದ ದಿವ್ಯಗುಣಗಳು ಪಕ್ವವಾಗುತ್ತವೆ. ಸೇವೆ ಮಾಡುವುದರಿಂದ ಮನುಷ್ಯನು ತಕ್ಷಣವೇ ಸುಖವನ್ನು ಪಡೆಯುತ್ತಾನೆ. ಈ ಅಲೌಕಿಕ ಸೇವೆಯಿಂದ ತನ್ನ ಆತ್ಮ ತೃಪ್ತಿ ದೊರೆಯುವುದರಿಂದ ಈ ಸೇವೆಯನ್ನು ನಿಲ್ಲದೆ ದಣಿಯದೆ ಮಾಡಬೇಕು. ಈ ಅಲೌಕಿಕ ಸೇವೆಯ ಅವಸರವು ಬ್ರಹ್ಮಾ–ಮುಖವಂಶಿ ಬ್ರಾಹ್ಮಣರಿಗೆ ಕಲ್ಪದಲ್ಲಿ ಕೇವಲ ಒಂದು ಬಾರಿ ಮಾತ್ರ ಸಿಗುತ್ತದೆ

ಮತ್ತು ನಾವು ಈ ಸೇವೆಯನ್ನು ಮಾಡಿ ಯಾರಿಗೂ ಋಣವನ್ನು ಹೊರಿಸು ವುದಿಲ್ಲ, ಬದಲಾಗಿ ನಮ್ಮ ಭವಿಷ್ಯವನ್ನು ನಾವು ಶ್ರೇಷ್ಠಮಾಡಿಕೊಳ್ಳುತ್ತೇವೆ. ಜ್ಞಾನಸೇವೆಯೇ ನಮ್ಮ ತಮೋಗುಣ ಸಂಸ್ಕಾರವನ್ನು ಸತೋಗುಣ ಸಂಸ್ಕಾರ ವನ್ನಾಗಿ ಪರಿವರ್ತಿಸಲು, ಹೆಜ್ಜೆ-ಹೆಜ್ಜೆಗೂ ಆಸುರೀ ಸಂಸ್ಕಾರವನ್ನು ಬಿಡಲು ಪ್ರಾಯೋಗಿಕ ರೀತಿಯಲ್ಲಿ ತ್ಯಾಗಿಯಾಗಲು ಒಂದು ತರದ ತರಬೇತಿಯಾಗಿದೆ. ಸೇವೆಯಲ್ಲಿಯೇ ಮಗ್ನನಾಗಿದ್ದರೆ ಮನುಷ್ಯನು ವಿಕಾರಗಳಿಂದ ಹಾಗೂ ವಿಕರ್ಮ ಗಳಿಂದ ದೂರವಾಗಬಲ್ಲನು ಅಂದರೆ ತನ್ನ ಕಲ್ಯಾಣವನ್ನು ಮಾಡಿಕೊಳ್ಳಬಲ್ಲನು. ಖರ್ಚಿಲ್ಲದೆ ಸಂತುಷ್ಟಿಯನ್ನು ಪಡೆಯಲು ಈ ಸೇವೆಯು ಒಂದು ಉತ್ತಮ ಸಾಧನವಾಗಿದೆ. ಈಗ ಪರಮಪಿತ ಪರಮಾತ್ಮನೇ ಈ ಮನುಷ್ಯ-ಸೃಷ್ಟಿಗಾಗಿ ಅಪರಿಮಿತವಾದ, ನಿಷ್ಕಾಮ ಮತ್ತು ನಿರಹಂಕಾರಿಯಾಗಿ ಈ ಅಲೌಕಿಕ ಸೇವೆ ಯಲ್ಲಿ ನಿರತನಾಗಿರುವುದರಿಂದ ನಾವೂ ಅವನೊಡನೆ ಸೇವೆಯಲ್ಲಿ ಸಮ್ಮಿಳಿತವಾಗ ಬೇಕಾಗಿದೆ. ಪರಮಾತ್ಮನ ಜೊತೆಯಲ್ಲಿ ಕಾರ್ಯಮಾಡುವ ಸೌಭಾಗ್ಯವು ಇದೊಂದು ಸಾರಿ ಮಾತ್ರ ದೊರೆಯುತ್ತದೆ. ವಿಕರ್ಮಗಳನ್ನು ದಗ್ಧಮಾಡಲು ಇರುವ ಒಂದೇ ಉಪಾಯ **'ಯೋಗ'**. ಹಾಗೆಯೇ ಆತ್ಮಗಳಿಗೆ ಜ್ಞಾನರತ್ನ ಗಳನ್ನು ದಾನಮಾಡಿ, ವಿಕಾರಗಳೆಂಬ ರೋಗಗಳಿಂದ ಪೀಡಿತವಾದ ಆತ್ಮಗಳಿಗೆ ಪವಿತ್ರತೆಯೆಂಬ ಸ್ವಾಸ್ಥ್ಯವನ್ನು ನೀಡಿ ಜ್ಞಾನ-ದಣಿವುಳ್ಳ ಆತ್ಮಗಳಿಗೆ ಜ್ಞಾನಾ ಮೃತವನ್ನು ಕುಡಿಸಿ ದುಃಖ ಹಾಗೂ ದುರ್ಗಂಧ ಸಂಸ್ಕಾರಗಳಿಂದ ಕೂಡಿದ ಪತಿತ ಆತ್ಮಗಳನ್ನು ಉದ್ಧಾರಮಾಡಿ. ಅವರಿಗೆ ಜನ್ಮ-ಜನ್ಮಾಂತರಗಳ ಕಾಲ ಸುಖ ವನ್ನು ಪ್ರಾಪ್ತಿಮಾಡಿಕೊಳ್ಳುವ ಬೀಗದ ಕೈಯನ್ನು ಕೊಟ್ಟು ಈಶ್ವರೀಯ ಸೇವೆ ಎಂಬ ಮಹಾಪುಣ್ಯಕಾರ್ಯದಲ್ಲಿ ಭಾಗಿಗಳಾಗಬೇಕಾಗಿದೆ.

—ಓಂ—



# ೭. ನಿರ್ಭಯ, ನಿಶ್ಚಿಂತೆ, ನಿಸ್ಸಂಕಲ್ಪ ಸ್ಥಿರ ಮತ್ತು ವಿಕಾಸ ಹಾಗೂ ಸಾಕ್ಷ್ಯಾವಸ್ಥೆ



**ಬ್ರಹ್ಮಾಕುಮಾರಿ**—ನಿನ್ನೆಯ ದಿನ ನಾವು ನಿಮಗೆ ಸರ್ವೋತ್ತಮ ತ್ಯಾಗ ಮತ್ತು ಸಂಪೂರ್ಣ ಸಮರ್ಪಣದ ಬಗ್ಗೆ ಹಾಗೂ ಉದಾರತೆ ಮತ್ತು ಸೇವೆಯ ಬಗ್ಗೆ ವಿವರಣೆ ನೀಡಿದ್ದೆವು. ಅದನ್ನು ಗಮನದಲ್ಲಿಟ್ಟುಕೊಂಡು ಹೇಳಿರಿ? ಯಾರು ಸಂಪೂರ್ಣ ತ್ಯಾಗಿಗಳೋ ಅವರಿಗೆ ಭಯವಿರುವುದೇ?

**ಜಿಜ್ಞಾಸು**—ಇಲ್ಲ.

**ಬ್ರಹ್ಮಾಕುಮಾರಿ**—ನಿಮ್ಮ ಉತ್ತರ ಸರಿಯಾಗಿದೆ. ಏಕೆಂದರೆ ಯಾರು ಎಲ್ಲವನ್ನೂ ತ್ಯಾಗಮಾಡಿರುವರೋ, ಅವರದಾಗಿ ಏನೂ ಇಲ್ಲವೋ; ನಮ್ರ ಭಾವ ಹಾಗೂ ಉದಾರಚಿತ್ತರಾಗಿ ಇತರರ ಅಲೌಕಿಕ ಸೇವೆಯನ್ನು ಮತ್ತು ಪುಣ್ಯಕಾರ್ಯವನ್ನು ಮಾಡುತ್ತಿರುತ್ತಾರೆಯೋ ಅವರಿಗೆ ಭಯವೇತಕ್ಕೆ ?

**ಜಿಜ್ಞಾಸು**— ಮನುಷ್ಯನಿಗೆ ಭಯವು ಯಾವ ಯಾವ ಕಾರಣದಿಂದ ಬರುತ್ತದೆ ಮತ್ತು ಭಯವು ಯಾವ ಯಾವ ರೂಪದಲ್ಲಿ ಬರುತ್ತದೆ ಹಾಗೂ ಭಯವುಳ್ಳ ಮನುಷ್ಯನ ಲಕ್ಷಣಗಳೇನೆಂಬುದೆಲ್ಲವನ್ನೂ ವಿವರಿಸಿ ಹೇಳಿರಿ.

## ಮೃತ್ಯುವಿನ ಭಯ

**ಬ್ರಹ್ಮಾಕುಮಾರಿ**—ಮನುಷ್ಯನು ಮೃತ್ಯುವಿಗೆ ಹೆದರುವುದು ಭಯದ ಒಂದು ರೂಪ. ದೇಹಕ್ಕೆ ಯಾವುದಾದರೂ ರೋಗ ಬಂದೀತೇನೋ ಅಥವಾ ದುರ್ಘಟನೆಯಿಂದ ಕಷ್ಟ ಸಂಭವಿಸೀತೇನೋ ಎಂಬ ಭಯ ಮನುಷ್ಯನಿಗಿರುತ್ತದೆ. ಈ ಪ್ರಕಾರದ ಭಯವು ತನ್ನ ದೇಹದ ಮೇಲೂ ಹಾಗೂ ಮಿತ್ರ ಸಂಬಂಧಿಗಳ ಮೇಲೂ ಇರುತ್ತದೆ. ಈ ಭಯ ಅಥವಾ ಚಿಂತೆಯು ನಿಶ್ಚಯ ಬಲದ ಅಥವಾ ಶುಭ ಕರ್ಮಗಳ ಕಡಿಮೆಯಿಂದ ಬರುತ್ತದೆ.

## ನಿಂದೆಯ ಭಯ

ನಿಂದೆಯ ಭಯವೂ ಸಹ ಆತ್ಮಬಲ ಮತ್ತು ಜ್ಞಾನಬಲದ ಕಡಿಮೆಯಿಂದ ಬರುತ್ತದೆ. ಒಂದು ವೇಳೆ ಮನುಷ್ಯನಿಗೆ ತನ್ನಲ್ಲಿಯೇ ತಾನು ಇಡುತ್ತಿರುವ ಹೆಜ್ಜೆಯು ಸರಿಯಾಗಿದೆ ಎಂಬ ನಿಶ್ಚಯವಿದ್ದಲ್ಲಿ ಅವನಿಗೆ ನಿಂದೆಯ ಚಿಂತೆಯೇ ಇರುವುದಿಲ್ಲ. ಮನುಷ್ಯನಲ್ಲಿ ವಾಕ್-ಬಲ, ನೀತಿ ಬಲ; ಯುಕ್ತಿಬಲ ಅಥವಾ ವ್ಯವಹಾರ ಚಾತುರ್ಯವಿದ್ದರೆ ಇತರ ಜನರು ಅವನ ಬಗ್ಗೆ ತಪ್ಪಾಗಿ ಮಾತನಾಡಿದರೂ ಅವರಿಗೆ ತಿಳುವಳಿಕೆ ಕೊಡಬಲ್ಲೆನೆಂಬ ವಿಶ್ವಾಸವಿರುತ್ತದೆ. ಯುಕ್ತಿಬಲವಿಲ್ಲದಿದ್ದರೆ ಆತ್ಮವಿಶ್ವಾಸವಿರುವುದಿಲ್ಲ. ಆತ್ಮವಿಶ್ವಾಸ ಅಥವಾ ಪೂರ್ಣಜ್ಞಾನವಿಲ್ಲದಿದ್ದಲ್ಲಿ ಮನುಷ್ಯನು ಜನರನ್ನು ಎದುರಿಸಲಾರನು. ಆಗ ಅವನಿಗೆ ಅದೇ ಚಿಂತೆ, ಭಯದ ರೂಪವಾಗಿ ಪರಿಣಮಿಸುತ್ತದೆ.

## ಪರಿಸ್ಥಿತಿಗಳ ಭಯ

ಒಮ್ಮೊಮ್ಮೆ ಮನುಷ್ಯನು ತನ್ನ ಭಯದ ಸಂಸ್ಕಾರದ ಕಾರಣದಿಂದ ಸಣ್ಣ ಮಾತನ್ನೇ ದೊಡ್ಡದನ್ನಾಗಿ ಮಾಡಿಕೊಂಡು ಹೆದರುತ್ತಾನೆ. ಪರಿಸ್ಥಿತಿ ಸಮೀಪಿಸಿದಂತೆಲ್ಲ ಮತ್ತಷ್ಟು ಚಿಂತೆ ಭಯಕ್ಕೊಳಗಾಗುವನು. ಉದಾಹರಣೆಗೆ ಮಗನು ಶಾಲೆಯಿಂದ ಬರದೇ ಇದ್ದಲ್ಲಿ ತಾಯಿಯು "ಏನಾಯಿತೊ? ರಸ್ತೆಯಲ್ಲಿ ಯಾವ ಅಪಘಾತ ಸಂಭವಿಸಿತೋ" ಇತ್ಯಾದಿ ಚಿಂತಿಸುತ್ತಾಳೆ. ಮೋಹದ ಕಾರಣದಿಂದ ಭಯ ಮತ್ತು ಭಯದ ಸಂಸ್ಕಾರದ ಕಾರಣದಿಂದ ಅನುಮಾನ ಬರುತ್ತದೆ. ಅನುಮಾನದಿಂದ ಭಯವು ಮತ್ತಷ್ಟು ಹೆಚ್ಚುತ್ತಾ ಹೋಗುತ್ತದೆ. ಕೆಲವು ವೇಳೆ ಈ ಭಯದಲ್ಲಿಯೇ ಆತ್ಮಪಕ್ಷಿಯು ಹಾರಿಹೋಗುವುದೂ ಉಂಟು. ಹೀಗೆ ಒಂದಲ್ಲ ಒಂದು ರೀತಿಯ ಆಸಕ್ತಿ, ಮೋಹ ಅಥವಾ ತಾನು ಹಿಂದೆ ಮಾಡಿದ ಕರ್ಮಗಳ ಫಲವೇ ಈ ಭಯವಾಗಿದೆ.

## ಮನುಷ್ಯರಿಂದ ಭಯ

ಬೇರೆಯವನು ತನ್ನ ಮೇಲೆ ಎಲ್ಲಿ ಧಾಳಿಮಾಡಿಯಾನೋ ಅಥವಾ ಶತ್ರುತ್ವದ ಕಾರಣದಿಂದಾಗಿ ಎಲ್ಲಿ ಹಾನಿಯನ್ನುಂಟು ಮಾಡುವನೋ ಎಂಬ

ಭಯವು ಮನುಷ್ಯನನ್ನು ಕಾಡುತ್ತಿರುತ್ತದೆ. ದಿವ್ಯಗುಣಗಳ ಕೊರತೆಯೇ ಇದಕ್ಕೆ ಕಾರಣ ಮನುಷ್ಯನಲ್ಲಿ ದಿವ್ಯಗುಣಗಳಿದ್ದರೆ ಅತಂಹವನೊಡನೆ ಜನರು ಮನಸ್ತಾಪಗೊಳ್ಳಲಾರರು. ಒಂದು ವೇಳೆ ಶತ್ರುಗಳಾದರೂ ಅವನ ಗುಣಗಳ ಕಾರಣದಿಂದ ಬೇಗನೆ ಅವನಿಗೆ ಸಹಯೋಗಿಗಳಾಗುವರು, ತಮ್ಮ ಜೀವನವನ್ನೇ ಅವನಿಗಾಗಿ ಕೊಡಲು ಸಿದ್ಧರಾಗುವರು. ಆ ಮನುಷ್ಯನಿಗೆ ತನ್ನಲ್ಲಿಯೇ 'ಯಾರು ನನ್ನ ಬಗ್ಗೆ ಅಸಮಾಧಾನ ಅಥವಾ ಮನಸ್ತಾಪಗೊಂಡಿರುವರೋ ಅವರನ್ನು ನಾನು ಒಂದಲ್ಲ ಒಂದು ದಿನ ನನ್ನ ಸಹನಶೀಲತೆ, ಪರ್ಶಿತಮ್ಯಾಖ, ಸಮ್ರತೆ, ಸೇವೆ. ಯೋಗಬಲ, ಮಿತ್ರಭಾವನೆ ಮೊದಲಾದವುಗಳಿಂದ ಪರಿವರ್ತಿಸುತ್ತೇನೆ'' ಎಂಬ ವಿಶ್ವಾಸವು ಮೂಡುತ್ತದೆ.

## ಬುದ್ಧಿ ಸಾಲದುದರಿಂದ ಭಯ

ಕಡಿಮೆ ಬುದ್ಧಿಯಿರುವುದರಿಂದ ಅಥವಾ ಆತ್ಮವಿಶ್ವಾಸವಿಲ್ಲದಿವುದರಿಂದ ಮನುಷ್ಯನು ತಾನು ಮಾಡುವ ಕರ್ಮದ ಬಗ್ಗೆ ಭಯವಿರುತ್ತದೆ, ಆ ಕರ್ಮದ ಪರಿಣಾಮ ಏನಾಗುವುದೋ ಎಂತೋ, ಇತರರು ಇದನ್ನು ಒಪ್ಪುವರೋಇಲ್ಲವೋ ಎಂಬ ಚಿಂತೆಯು ಕಾಡುತ್ತಿರುತ್ತದೆ;

ಇದುವರೆಗೂ ಹೇಳಿದ ನಾನಾರೂಪದ ಭಯವೆಲ್ಲಕ್ಕೂ ಜ್ಞಾನಬಲ, ಯೋಗಬಲ, ನಿಶ್ಚಯಬಲ, ಮನೋಬಲ ಇತ್ಯಾದಿ ದಿವ್ಯಗುಣಗಳ ಕೊರತೆಯಾಗಿರುವುದೇ ಕಾರಣವಾಗಿದೆ. ಇದೆಲ್ಲಕ್ಕೂ ಮೂಲಕಾರಣ ದೇಹಾಭಿಮಾನ, ಸಂಕಲ್ಪ-ವಿಕಲ್ಪ ಮೋಹ, ಮಮತೆ ಮೊದಲಾದವುಗಳ ತ್ಯಾಗಮಾಡಿಲ್ಲದಿರುವುದು. ತ್ಯಾಗವಿಲ್ಲದ್ದರಿಂದ ಅಥವಾ ಸರ್ವಸ್ವ ಸಮರ್ಪಣೆ ಇಲ್ಲದಿರುವುದರಿಂದ ಮನುಷ್ಯನಿಗೆ ಚಿಂತೆ ಅಥವಾ ಭಯವುಂಟಾಗುತ್ತದೆ,

**ಜಿಜ್ಞಾಸು**—ಸಹೋದರಿಯವರೇ ಈ ಎಲ್ಲಾ ಪ್ರಕಾರದ ಭಯ ಅಥವಾ ಚಿಂತೆಗಳು ದೂರವಾಗುವುದು ಹೇಗೆ? ಭಯವು ಮನುಷ್ಯನ ದೇಹವನ್ನೇ ದಹಿಸಿಬಿಡುತ್ತದೆ ಮತ್ತು ಜೀವಿತ ಮನುಷ್ಯನಿಗೆ ಮೃತ್ಯುವಿನ ಅನುಭವವಾಗಿ ಬಿಡುತ್ತದೆ. ಚಿಂತೆಯೂ ಸಹ ಚಿತೆಯಿದ್ದಂತೆ.

ಬ್ರಹ್ಮಾಕುಮಾರಿ—ಯಾವುದರ ಕೊರತೆಯ ಕಾರಣದಿಂದ ಭಯವುಂಟಾಗುವುದೋ ಆ ಕೊರತೆಯನ್ನು ನೀಗಿಸಿದಾಗ ಭಯವು ತೊಲಗುತ್ತದೆ; ಚಿಂತೆಯು ದೂರವಾಗುತ್ತದೆ. ಉದಾಹರಣೆಗೆ ಮೃತ್ಯುವಿನ ಭಯಕ್ಕೆ ಜ್ಞಾನ ಬಲ ಮತ್ತು ಆತ್ಮಾಭಿಮಾನದ ಆವಶ್ಯಕತೆಯಿದೆ. ಈ ಈಶ್ವರೀಯ ಜ್ಞಾನದ ಆಧಾರದಿಂದ ಮನುಷ್ಯನು ಯೋಚಿಸಬೇಕಾದುದೇನೆಂದರೆ—"ನಾನು ನನ್ನನ್ನು ಸರ್ವ-ಸಮರ್ಥ-ಪರಮಪಿತ ಪರಮಾತ್ಮನಿಗೆ ಅರ್ಪಿಸಿರುವೆನು ಈಗ ನನ್ನ ಉನ್ನತಿಯಾಗುವ ಕಲ್ಯಾಣಕಾರಿ ಸಂಗಮಯುಗವಾಗಿದೆ. ಈಗ ಏನೇ ಆಗಲಿ, ನಡೆಯಲಿ ಅದೆಲ್ಲವೂ ನನ್ನ ಕಲ್ಯಾಣಕ್ಕೆ. ಈ ಶಾರೀರಿಕ ವಿಘ್ನಗಳ ಸಮಯದಲ್ಲಿಯೂ ನಾನು ಬುದ್ಧಿಯೋಗದಿಂದ ಶಿವ ತಂದೆಯನ್ನು ನಂಬಿ ಅವನ ಜೊತೆಯಲ್ಲಿದ್ದರೆ ನನ್ನ ಸಂಪೂರ್ಣ ಜವಾಬ್ದಾರಿಯೆಲ್ಲವೂ ಅವನ ಮೇಲೆಯೇ ಇರುತ್ತದೆ. ಅಂತ್ಯದವರೆಗೆ ಅವನ ಆಜ್ಞೆಯನ್ನು ಪಾಲಿಸುವುದರಿಂದ, ಮನ-ಬುದ್ಧಿಯಿಂದ ಅವನವನಾಗಿಯೇ ನಡೆಯುವುದರಿಂದ ನನ್ನ ದೇಹಾಂತ್ಯವಾದರೂ ನನ್ನ ಪೂರ್ಣ ಕಲ್ಯಾಣವಾಗುವುದು ಮತ್ತು ಸದಾ ಅವನಿಂದ ನೆರವೂ ದೊರಕುತ್ತದೆ. ಆದ್ದರಿಂದ ಆ ಪರಮಪಿತ ಪರಮಾತ್ಮನಿಗೆ ಸಮರ್ಪಣವಾದ ಮೇಲೆ ನನ್ನ ಪ್ರತಿಯೊಂದು ಮಾತಿನಲ್ಲಿಯೂ ಒಳ್ಳೆಯದೇ ಇದೆ. ಬದುಕಿದ್ದರೂ ಕಲ್ಯಾಣವಿದೆ. ಸತ್ತರೂ ದುರ್ಗತಿಯಿಲ್ಲ."—ಹೀಗೆ ಯೋಚಿಸಿ ಮನುಷ್ಯನು ನಿಶ್ಚಿಂತನಾಗಿರಬೇಕು ಮತ್ತು ಈಶ್ವರೀಯ ಸ್ಮೃತಿಯಿಂದ ಪ್ರಭುವಿನಿಂದ ಬಲವನ್ನು ಪಡೆಯಬೇಕು. ಹಾಗೆ ಮಾಡದೆ ದೇಹದ ಚಿಂತೆ ಮಾಡಿದಲ್ಲಿ ದೇಹಾಭಿಮಾನದ ಮತ್ತು ಮೋಹ ಅಥವಾ ಆಸಕ್ತಿಯಿಂದಿರುವ ಮನುಷ್ಯನು ಭಯವೆಂಬ ಭೂತದ ಕಾರಣದಿಂದ ಮುಂದಿನ ಜನ್ಮಕ್ಕೂ ಭಯದ ಸಂಸ್ಕಾರವನ್ನು ಗಳಿಸಿಕೊಂಡು ಹೋಗುವನು ಈ ಆಸಕ್ತಿ ಹಾಗೂ ವಾಸನೆಯ ಕಾರಣದಿಂದಾಗಿ ಇದೇ ದೇಹದ ಸೂಕ್ಷ್ಮರೂಪ (ಛಾಯಾರೂಪ) ವನ್ನು ಪಡೆದು ಭೂತವಾಗುವನು. ಆದ್ದರಿಂದ ಪ್ರತಿಯೊಂದು ಸಂದರ್ಭದಲ್ಲಿಯೂ ಈಶ್ವರೀಯ ಸ್ಮೃತಿಯಲ್ಲಿ ಮಗ್ನರಾಗುವುದರಲ್ಲಿ, ತನ್ನ ಭವಿಷ್ಯವನ್ನು ಉತ್ತಮ ಪಡಿಸಿಕೊಳ್ಳುವುದರಲ್ಲಿ ಲಾಭವಿದೆ. ಈ ಮಾತನ್ನು ಅರ್ಥಮಾಡಿಕೊಂಡು ಆತ್ಮಾಭಿಮಾನಿಯಾಗುವುದರಿಂದ ಭಯವೆಂಬ ಭೂತವು ಪಲಾಯನ ಮಾಡುವುದು.

ಎರಡನೆಯದಾಗಿ ನಿಶ್ಚಯ ಬಲದ ಕೊರತೆಯಿಂದ ಲೋಕ-ಲಜ್ಜೆಯ

ಭಯವು ಬರುತ್ತದೆಂದು ನಾನು ಹೇಳಿದ್ದೆನು. ದಿವ್ಯ ಬುದ್ಧಿ ವಿಧಾತನಾದ ಪರಮಪಿತ ಪರಮಾತ್ಮನ ಮತದಂತೆ ನಡೆಯುತ್ತಿರುವೆನೆಂಬ ಪರಿಪಕ್ವವಾದ ನಿಶ್ಚಯವು ಮನುಷ್ಯನಿಗೆ ಇದ್ದರೆ ಇತರರ ನಿಂದನೆಯ ಚಿಂತೆಯನ್ನೇಕೆ ಮಾಡುವನು ? ಪ್ರಭುವನ್ನು ಪಡೆಯುವ ಚಿಂತೆಯೂ ಇತ್ತು. ಈಗ ಅವನನ್ನು ಪಡೆದ ಮೇಲೆ ಇನ್ನಾರ ಚಿಂತೆ ಬೇಕಾಗಿದೆ? ನಾಯಿಗಳು ಬೊಗಳುತ್ತಿರುವುದನ್ನು ನೋಡಿ ತಾನು ಚೋರನಿರಬಹುದೇನೋ ಎಂಬ ಸಂಶಯವು ಬಂದರೆ ತನ್ನಲ್ಲಿಯೇ ವಿಶ್ವಾಸ ಅಥವಾ ನಿಶ್ಚಯದ ಕೊರತೆಯಿದೆ ಎಂಬುದು ತಿಳಿಯುವುದಿಲ್ಲವೆ? ಪರಮಾತ್ಮನೇ ಸಿಕ್ಕಿರುವಾಗ ಮತ್ತಿನ್ನೇನು ಬೇಕು ಮತ್ತು ಇತರರ ಭಯವಾದರೂ ಏಕೆ? ಮನುಷ್ಯನು ಇತರರ ಮಾತುಗಳನ್ನು ಕೇಳುತ್ತಿದ್ದರೂ ಅದರ ಬಗ್ಗೆ ಚಿಂತೆಮಾಡದೆ ನಿಶ್ಚಿಂತನಾಗಿದ್ದರೆ ಮತ್ತು ಈಶ್ವರ–ಪ್ರಾಪ್ತಿಯ ಹರ್ಷದಲ್ಲಿಯೇ ಇದ್ದರೆಅವನಿಂದ ಲೋಕ–ಲಜ್ಜೆ ಮತ್ತು ನಿಂದೆಯ ಭಯ–ಇವುಗಳು ತೊಲಗುವುವು. ಅಧಿಕ ಸ್ಪಷ್ಟೀಕರಣದಿಂದ ಜ್ಞಾನವನ್ನು ಮತ್ತಷ್ಟು ಗಳಿಸಿಕೊಂಡು ನಿಶ್ಚಯ ಹಾಗೂ ಅನುಭವವನ್ನು ಹೆಚ್ಚಿಸಿಕೊಳ್ಳುವುದರಿಂದ ಮತ್ತು ವಾಕ್–ಬಲ, ಯುಕ್ತಿ–ಬಲ, ಜ್ಞಾನ–ಬಲ ಇವುಗಳನ್ನೂ ಹೆಚ್ಚಿಸಿಕೊಳ್ಳುವುದರಿಂದ ಮನುಷ್ಯನು ಈ ಭಯದ ಬಂಧನದಿಂದ ಪಾರಾಗಬಲ್ಲನು.

ಯಾರು ನಿಂದಿಸುವರೋ ಅವರಿಗೆ ಈ ರೀತಿ ಹೇಳಬೇಕು—"ತಾವು ಯಾರನ್ನು ನಿಂದಿಸುತ್ತಿರುವಿರಿ? ತಾವು ಯಾರನ್ನು ನಿಂದಿಸುತ್ತಿರುವಿರೊ ಅವರು ಸತ್ತಿದ್ದಾರೆ ಅಥವಾ ಪ್ರಭುವಿಗೆ ಪ್ರಿಯರಾಗಿದ್ದಾರೆ. ಅವರು ಬುದ್ಧಿವಂತರಿಗೂ ಬುದ್ಧಿದಾತನಾಗಿರುವ ಸರ್ವ ಸಮರ್ಥನಾದ ಪರಮಾತ್ಮನ ಶ್ರೀಮತದಂತೆ ನಡೆಯುತ್ತಿರುವರು. ಅವರು ಯಾವ ಮನುಷ್ಯರ ಇಚ್ಛೆಯಂತೆಯೂ ನಡೆಯುತ್ತಿಲ್ಲ. ನೀವು ಹೇಳುವಂತೆ ನಮಗೆಲ್ಲಾ ಮತದಾತರಾದ ಅದ್ಭುತ ಹಾಗೂ ಅಪೂರ್ವ ಮನುಷ್ಯರಾದ ಪ್ರಜಾಪಿತ ಬ್ರಹ್ಮಾರವರೂ ಸಹ ಅವನ ಶ್ರೀಮತದಂತೆಯೇ ನಡೆಯುತ್ತಿರುವರು. ಆ ಒಬ್ಬ ಪರಮಾತ್ಮನ ಮತದಿಂದ ಮನುಷ್ಯನು ಮಾಯೆಯ ಬಲೆಯಿಂದ ಬಿಡುಗಡೆಯಾಗಬಲ್ಲನು ಮತ್ತು ಅವನ ಜೀವನ ನಿರ್ವಿಕಾರ, ಪವಿತ್ರ ಅಥವಾ ಶ್ರೇಷ್ಠವಾಗುವುದು.ಆದ್ದರಿಂದ ಇನ್ನೊಂದು ಮುಂದಿಯ ಜೀವನವು ಪವಿತ್ರ

ವಾಗುವುದನ್ನು ನೋಡಿ ಅಂತಹ ಪವಿತ್ರ ಜೀವನವನ್ನಾಗಿ ಪರಿವರ್ತಿಸುವವನನ್ನು ಗುರುತಿಸಲಾರಿರಾ?'' ಅಲ್ಲದೆ ಅಂತಹವರನ್ನು ಹೀಗೆಯೂ ಕೇಳಬೇಕು—"ಈ ಮತವನ್ನು ಕೊಡುವವನು ನಿಮ್ಮ ವಿಚಾರದಲ್ಲಿ 'ಪರಮಾತ್ಮನಲ್ಲ' ಎಂಬುದಾಗಿರ ಬಹುದು. ಹೋಗಲಿ ಯಾರೋ 'ಮಹಾತ್ಮ' ನಾದರೂ ಆಗಿರಬೇಕಲ್ಲವೆ? ಇದೂ ಅಲ್ಲವೆಂದು ನೀವು ಹೇಳುವುದಾದರೆ ಇಷ್ಟಕ್ಕಿಷ್ಟಂತೆ ಯಾರ ಸಲಹೆಯೂ ಇಲ್ಲದೆ ಕೆಟ್ಟದ್ದನ್ನು ಬಿಟ್ಟು ಒಳ್ಳೆಯವರಾಗಲು ಸಾಧ್ಯವೆ? ಒಳ್ಳೆಯದು, ನಿಮಗೆ ಇದರಲ್ಲೂ ವಿಶ್ವಾಸವಿಲ್ಲದಿದ್ದರೆ ನಮ್ಮನ್ನು ವಿಶ್ವಾಸಘಾತುಕರನ್ನಾಗಿ ಏಕೆ ಮಾಡು ವಿರಿ? ನಮ್ಮ ಕರ್ಮದ ಜವಾಬ್ದಾರಿ ನಿಮ್ಮ ಮೇಲಿದೆಯೋ ಅಥವಾ ನಮ್ಮ ಮೇಲಿ ದೆಯೋ? ಇಂದಿನ ಮಾನವನು ತನ್ನ ಕರ್ಮದ ಜವಾಬ್ದಾರಿಯನ್ನೇ ತಾನು ವಡೆ ಯಲು ಸಾಧ್ಯವಿಲ್ಲದಿರುವಾಗ ಅಥವಾ ನಿರ್ವಹಿಸಲಾಗದೆ ಇರುವಾಗ [ರೋಗ, ಶೋಕ, ವಿಕಾರೀ ಅವಸ್ಥೆಗಳಿಂದ ಸ್ಪಷ್ಟವಾಗುವಂತೆ] ಇತರರ ಕರ್ಮಗಳ ಜವಾ ಬ್ದಾರಿಯನ್ನು ಹೇಗೆ ಹೊರಬಲ್ಲನು? ಹಾಗೆ ತನ್ನ ಜೀವನವೇ ಶ್ರೇಷ್ಠವಾಗಿಲ್ಲ ದಿದ್ದರೆ ಇತರರಜೀವನವನ್ನು ಶ್ರೇಷ್ಠ ಮಾಡಬಲ್ಲನೆಂಬ ನಿಶ್ಚಯವು ಬರಲು ಸಾಧ್ಯವೆ? ಈಗ ನಾವು ಯಾರ ಶ್ರೀಮತದಂತೆ ನಡೆಯುತ್ತಿರುವೆವೋ ಅದರಿಂದ ನಮ್ಮ ಜೀವನ ಶ್ರೇಷ್ಠವಾಗುತ್ತಿದೆ ಮತ್ತು ನಾವು ನಮ್ಮ ಜೀವನದಲ್ಲಿ ಪವಿತ್ರತೆ ಮತ್ತು ಶಾಂತಿಯನ್ನು ಅನುಭವಿಸುತ್ತಿದ್ದೇವೆ. ಆದ್ದರಿಂದ ಇದನ್ನು ಬಿಟ್ಟು ಇತರರ ಮಾತಿ ನಂತೆ ಏಕೆ ನಡೆಯಬೇಕು? ನೀವು ಕರ್ಮದ ಗಹನಗತಿಯನ್ನು ತಿಳಿದಿರುವಿರಾ? ನಾವು ಆ ಪರಮಾತ್ಮನ ಮತದಂತೆ ನಡೆಯುತ್ತಿದ್ದೇವೆ. ನೀವು ಇತರರ ಮಾತ ನ್ನು ಕೇಳಿ ನಮ್ಮನ್ನೇಕೆ ತಡೆದು ವ್ಯರ್ಥವಾಗಿ ಪಾಪದ ಹೊರೆಯನ್ನು ಹೊತ್ತು ಕೊಳ್ಳುವಿರಿ? ಮೊದಲು ತಾನು ನೋಡಬೇಕು, ವಿಚಾರ ಮಾಡಬೇಕು; ತದ ನಂತರ ನಿರ್ಣಯ ಮಾಡಬೇಕಾದುದು ವಿವೇಕಿಗಳ ಲಕ್ಷಣ. ನಮ್ಮನ್ನು ಈ ರೀತಿ ಅಡ್ಡಿಮಾಡಲು ನಮ್ಮಲ್ಲಿ ಯಾವ ದೋಷವನ್ನು ಕಂಡಿರಿ? ಯಾವುದಕ್ಕೆ ಪವಿತ್ರತೆ, ಬ್ರಹ್ಮಚರ್ಯ, ನಿಯಮ, ವ್ರತ, ಸದಾಚಾರ ಎಂಬ ಹೆಸರುಗಳಿವೆಯೋ ಅವು ಗಳನ್ನು ಕೆಟ್ಟದ್ದೆನ್ನುವಿರಾ? ಒಂದುವೇಳೆ ಇದೇ ನಿಮ್ಮ ಸಿದ್ಧಾಂತವಾದರೆ ನಾವು ಪ್ರಭು ಮತ್ತು ಪವಿತ್ರತೆ ಇವೆರಡನ್ನೂ ನಮ್ಮ ಪ್ರಾಣ ಹೋದರೂ ಬಿಡಲಾರೆವು. **ಯಾರು ನಮ್ಮನ್ನು ನಿಂದಿಸುವರೋ ಅವರೇ ನಮ್ಮ ಮಿತ್ರರು.** ಏಕೆಂದರೆ ಅವರ ಟೀಕೆಯಿಂದ ನಮ್ಮ ಕರ್ಮಗಳು ಶ್ರೇಷ್ಠವಾಗುವುದರ ಕಡೆಗೆ ಅಧಿಕ

ಗಮನ ಕೊಡುತ್ತೇವೆ ಮತ್ತು ನಿಂದನೆಯನ್ನು ಸಹಿಸುವುದರಿಂದ ನಮ್ಮ ಪಾಪಗಳೂ ಕಳೆಯುತ್ತವೆ"—ಈ ಪ್ರಕಾರವಾಗಿ ಮೊದಲು ನಿಮ್ಮ ಮನದಲ್ಲಿ ಯೋಚಿಸಿ, ಯೋಗಯುಕ್ತರಾಗಿ ಹುರುಪಿನಿಂದ ಸನ್ಮಾನ ಪೂರ್ವಕವಾಗಿ, ನಿರ್ಭಯರಾಗಿ, ಶಕ್ತಿ ಸ್ವರೂಪದಲ್ಲಿ ಸ್ಥಿರರಾಗಿ ಅವರಿಗೆ ಹೇಳಬೇಕು. ಆಗ ಅವರ ಲೋಕಲಜ್ಜೆಯೆಂಬ ಬೃಹತ್ ಕೋಟೆಯು ಕುಸಿದು ಬೀಳುವುದು ಅಥವಾ ಅವರ ಬಂಧನವು ಕತ್ತರಿಸುವುದು. ಸರ್ವಶಕ್ತಿವಂತ ಪರಮಾತ್ಮನನ್ನೂ ಹಾಗೂ ತನ್ನ ಶಕ್ತಿರೂಪನ್ನೂ ನೆನೆಯುವುದರಿಂದ ತನ್ನಲ್ಲಿನ ಕುರಿಯಂತಹ ಭಯವು ಹೊರಟುಹೋಗುವುದು. ಒಂದು ವೇಳೆ ಬಂಧನವೇ ನಮ್ಮ ಹಣೆಬರಹವಾಗಿದ್ದರೆ ಆಸುರೀ ಸ್ವಭಾವದ ಜನರೇ ಒಂದು ಸೆರೆಮನೆಯೆಂದು ತಿಳಿದು ಪ್ರಭುವಿನ ಪ್ರೀತಿಯಲ್ಲಿ, ಅವನಸ್ಮೃತಿಯಲ್ಲಿದ್ದು ಅವರಿಗೆ ಸದ್ಬುದ್ಧಿಯನ್ನು ಕೊಡುವಂತೆ ನಿವೇದನೆ ಮಾಡಿಕೊಳ್ಳಬೇಕು. ಶರೀರಕ್ಕೆ ಮಾತ್ರ ಬಂಧನವನ್ನು ವಿಧಿಸಬಹುದು ಆದರೆ ಮನಸ್ಸಿಗೆ ಬಂಧನ ವಿಧಿಸಲು ಸಾಧ್ಯವಿಲ್ಲ. ಆದ್ದರಿಂದ ಒಂದು ವೇಳೆ ಶರೀರಕ್ಕೆ ಯಾವುದೇ ಬಂಧನವನ್ನು ವಿಧಿಸಿದರೂ ಮನಸ್ಸಿನಿಂದ ಪ್ರಭುವನ್ನು ನೆನೆಯುತ್ತಿದ್ದರೆ ಈ ಭಯವೂ ಓಡಿಹೋಗುತ್ತದೆ ಮತ್ತು ಈ ಪರೀಕ್ಷೆಯಿಂದಲೂ ಪಾರಾಗಬಹುದು.

ಮೂರನೆಯ ಪ್ರಕಾರದ ಪರಿಸ್ಥಿತಿಯ ಭಯಕ್ಕೆ ಆಸಕ್ತಿ, ಮೋಹ, ಫಲದ ಆಸೆ ಹಾಗೂ ನಿರ್ಣಯ ಶಕ್ತಿಯ ಮತ್ತು ಮನೋಬಲದ ಕೊರತೆ ಇವು ಮುಖ್ಯ ಕಾರಣಗಳು. ಪರಿಸ್ಥಿತಿಯ ವಿಕಟರೂಪವನ್ನು ನೋಡಿ ಗಾಬರಿಪಟ್ಟು ಭಯಭೀತರಾಗಿ ಶಕ್ತಿ ಅಸ್ತ್ರಗಳನ್ನು ಬಿಡುವುದರಿಂದ ಮುಂದೆ ಪೇಚಾಡಬೇಕಾಗುತ್ತದೆ. ವಾಸ್ತವಿಕವಾದ ರೀತಿಯೆಂದರೆ ಮೊದಲು ನಮ್ಮ ಮನೋಸ್ಥಿತಿಯನ್ನು ಸರಿಯಾಗಿಟ್ಟುಕೊಳ್ಳಬೇಕು 'ಪರಧರ್ಮ ದುಃಖ, ಸ್ವಧರ್ಮ ಸುಖ' ಎನ್ನುವಂತೆ ಸ್ವಸ್ಥಿತಿಯಿಂದ ನಮಗೆ ಅಂತ್ಯದಲ್ಲಿ ಸುಖವೇ ಉಂಟಾಗುತ್ತದೆ. ಏಕೆಂದರೆ ಪರಿಸ್ಥಿತಿಯನ್ನು ಎದುರಿಸಲು ಸ್ವಸ್ಥಿತಿಯಲ್ಲಿರಬೇಕಾದುದು ಅತ್ಯಾವಶ್ಯಕ. ಸ್ವಸ್ಥಿತಿಯಲ್ಲಿರುವುದರಿಂದ ಸ್ಥಿತಿಯ ಬಲವೂ ಸಿಗುತ್ತದೆ. ಸ್ವತಃ ನಮ್ಮ ಬುದ್ಧಿಯು ನಮ್ಮ ವಶದಲ್ಲಿ ಇಲ್ಲದಿದ್ದರೆ ಪರಿಸ್ಥಿತಿಯು ಹೇಗೆ ಸುಧಾರಿಸಲು ಸಾಧ್ಯ? ಸ್ಥಿತಿಯನ್ನು ಸರಿಯಾಗಿ ಇಡುವುದರಿಂದ ಮತ್ತು ಸ್ಮೃತಿಯನ್ನು ಈಶ್ವರನಲ್ಲಿ ಕೇಂದ್ರೀಕರಿಸುವುದರಿಂದ

ಬುದ್ಧಿಗೆ ಬಲವು ಸಿಗುತ್ತದೆ, ನಿರ್ಣಯ ಶಕ್ತಿಯು ತೀಕ್ಷ್ಣವಾಗುತ್ತದೆ ಮತ್ತು ಪರಿಸ್ಥಿತಿಯಿಂದ ಪಾರಾಗಲು ಮಾರ್ಗ-ಪ್ರದರ್ಶನವೂ ಸಿಗುತ್ತದೆ.

## ಏನಾಗುವುದೋ ? ಏನು ಮಾಡಲಿ ?

ಯಾವುದಾದರೂ ಕಠಿಣ ಪರಿಸ್ಥಿತಿಯನ್ನು ನೋಡಿ "ಅಯ್ಯೋ ಈಗ ಏನಾಗುವುದೋ" ಎಂದು ಮನುಷ್ಯನು ಯೋಚಿಸಿ ತನಗೆ ತಾನೇ ಮನೋಮಯ ಭೂತದಿಂದ ಹೆದರುತ್ತಾನೆ. ಆಗುವುದೇನು? ಏನಾಗಬೇಕೋ ಅದೇ ಆಗುತ್ತದೆ. ಹಾಗೆ ಹೆದರುವುದು ಅಳ್ಳೆದೆಯವರ ಗುಣ. ಈಗಾಗಲೇ ಪರಮಾತ್ಮನು ಹೇಳಿರುವಂತೆ ಈಗ ಈ ಕಲಿಯುಗ ಸೃಷ್ಟಿಯು ಮಹಾವಿನಾಶವಾಗಲಿವೆ ಮತ್ತು ಸತ್ಯಯುಗ ಸೃಷ್ಟಿಯು ಸ್ಥಾಪನೆಯಾಗುತ್ತಿದೆ. ನೀವೂ ವಿಪರೀತ ಬುದ್ಧಿಯುಳ್ಳವರಾದರೆ ನಿಮ್ಮ ವಿನಾಶವೂ ಆಗಿಬಿಡುತ್ತದೆ. ಪ್ರೀತಿ ಬುದ್ಧಿಯುಳ್ಳವರಾದರೆ ಜೀವನ್ಮುಕ್ತಿಯ ಪಾಲುಗಾರರಾಗುವಿರಿ. ಈಗ ರಾಮ ಅರ್ಥಾತ್ ಲೋಕ ರಕ್ಷಕ ಪರಮಪಿತ ಶಿವನು ಮೂರು ಕಾಲಗಳ ವೃತ್ತಾಂತವನ್ನೂ ಹೇಳಿರುವನು ಮತ್ತು ಭವಿಷ್ಯದ ಬಗ್ಗೆಯೂ ಸ್ಪಷ್ಟವಾಗಿ ತಿಳಿಸಿರುವನು. ಆದ್ದರಿಂದ ಪುನಃ "ಹೇರಾಮ! ಮುಂದೇನು ಗತಿ?" ಎಂದು ಚಿಂತಿಸುವುದು ತಮ್ಮ ಅಜ್ಞಾನ ಹಾಗೂ ವಿಸ್ಮೃತಿಯನ್ನು ಸೂಚಿಸಿದಂತಾಗುತ್ತದೆ. ರಾಮನು ನಮ್ಮ ಉದ್ಧಾರಕ್ಕಾಗಿಯೇ ಬಂದಿರುವನು. ನಾವು ಉದ್ಧಾರವಾಗದೆ "ಅದೇಕೆ ಹಾಗಾಯಿತು? ಇದೇಕೆ ಹೀಗಾಯಿತು? ಹೀಗಾಗದೆ ಹಾಗಾಗಿದ್ದರೆ ಚೆನ್ನಾಗಿರುತ್ತಿತ್ತು!" ಹೀಗೆ ಹೇಳತೊಡಗಿದರೆ ಅದು ಯಾರ ದೋಷ? ರಾಮನಾದರೋ ದುರ್ಗತಿಯಲ್ಲಿರುವವರಿಗೆ ಸದ್ಗತಿಯನ್ನು ಕೊಡುತ್ತಾನೆ ಮತ್ತು ನಮ್ಮ ಸಂಕಟವನ್ನು ದೂರಮಾಡುತ್ತಾನೆ. ನಾವು ಆವನ ಸಹಾಯವನ್ನು ಪಡೆಯುವುದಕ್ಕೆ ಬದಲು ಅವನಿಂದ ದೂರವಾಗಿ, ಅವನಿಂದ ಬಲವನ್ನು ಪಡೆಯುವುದಕ್ಕೆ ಬದಲು ಮಾಯೆಯಿಂದ ಏಟನ್ನು ತಿಂದು ಪುನಃ "ಈಗ ನಾನು ಏನು ಮಾಡಲಿ? ಹೇಗೆ ಮಾಡಲಿ?" ಎಂದು ಹೇಳಿದರೆ ರಣರಂಗದಲ್ಲಿ ಗಾಂಡೀವವನ್ನು ಎಸೆದು ಕುಳಿತ ಅರ್ಜುನನಂತಾಗುತ್ತದೆಯಷ್ಟೆ. ನಮಗಾಗಿ ಕರ್ತವ್ಯ ಯಾವುದು ? ಅಕರ್ತವ್ಯ ಯಾವುದು ? ಎಂಬುದನ್ನು ಸ್ಪಷ್ಟವಾಗಿ ಪರಮಪಿತ ಪರಮಾತ್ಮನು ಹೇಳಿರುವನು. ಈಗ ಆವು

ಗಳನ್ನು ನಮ್ಮ ಜೀವನದಲ್ಲಿ ಧಾರಣೆ ಮಾಡುವುದು ನಮ್ಮ ಕೆಲಸ. ಇವರಲ್ಲಿ ರಾಮನು ಏನು ತಾನೆ ಮಾಡಿಯಾನು? ರಾಮನು ಪಸ್ತಿಯನ್ನು ತೋರಿಸುವನು. ನಡೆಯಬೇಕಾದುದು ಮತ್ತು ಗುರಿ ಸೇರಬೇಕಾದುದು ನಮ್ಮ ಕರ್ತವ್ಯ. ರಾಮನು ನಮಗೆ ಸಹಾಯ ಮಾಡುವನು. ಸಾಹಸ ಮಾಡಬೇಕಾದವರು ನಾವು. ಪರಮಪಿತ ಪರಮಾತ್ಮನ ಆಜ್ಞೆಗಳನ್ನು ಪಾಲನೆ ಮಾಡುತ್ತಾ ಅವನ ಸ್ಮೃತಿಯಲ್ಲಿ ಹಾಗೂ ಸ್ವಸ್ಥಿತಿಯಲ್ಲಿರುತ್ತಾ ಪರಿಸ್ಥಿತಿಯನ್ನು ಎದುರಿಸಿದರೆ ಬೆಣ್ಣೆಯಲ್ಲಿನ ಕೂದಲನ್ನು ತೆಗೆದಷ್ಟು ಸಹಜವಾಗಿ ಪರಿಸ್ಥಿತಿಯು ದೂರವಾಗುತ್ತದೆ ಮತ್ತು ಸೂಜಿಗೆ ಬದಲು ಎಳೆಯದಾದ ಮುಳ್ಳು ತಾಗಿದಷ್ಟು ಮಾತ್ರ ಅನುಭವವಾಗುತ್ತದೆ ನಾವು ನಮ್ಮ ಜೀವನವನ್ನು ರಾಮನಿಗೆ ಸಮರ್ಪಿಸದಿದ್ದಲ್ಲಿ, ನಮ್ಮದೆಲ್ಲವನ್ನೂ ಅವನ ವಶಕ್ಕೆ ಕೊಡದಿದ್ದಲ್ಲಿ ಮತ್ತು ಅವನು ನಮ್ಮ ಮೇಲೆ ಹಾಕಿರುವ ಹೊಣೆಗಾರಿಕೆಯನ್ನು ತೆಗೆದುಕೊಳ್ಳದಿದ್ದಲ್ಲಿ ಅವನಿಂದ ಪೂರ್ತಿ ಸಹಾಯ ಸಿಗುವು-ದಾದರೂ ಹೇಗೆ? ಒಂದುವೇಳೆ ನಮ್ಮ ಜೀವನವನ್ನು ಅವನಿಗೆ ಅರ್ಪಿಸಿದರೆ ಪುನಃ ಇನ್ನಾವ ಮಾತಿಗೆ ಹೆದರಬೇಕು? ರಾಮನಿಗೆ ಅರ್ಪಿಸಿದ ಜೀವನ ನೌಕೆಯು ನಮ್ಮ ಪೂರ್ವ ಕರ್ಮಗಳಿಂದ ಬಂದ ಬಿರುಗಾಳಿಗೆ ಅಲುಗಾಡುವುದೇ ಹೊರತು ಮುಳುಗುವುದಿಲ್ಲ. ನಮ್ಮ ಮನಸ್ಸು ರಾಮನಲ್ಲಿರದೆ ಅಲ್ಲಿ ಇಲ್ಲಿ ಹಾರಾಡುವುದಾದರೆ ಜೀವನನೌಕೆಯೂ ಸಂಸಾರ ಸಾಗರದಲ್ಲಿ ಅಲುಗಾಡುವುದಲ್ಲದೆ ಮುಳುಗಿಯೂ ಬಿಡುತ್ತದೆ. ಇದರಿಂದ ಪಾರುಮಾಡುವವನು ಅಂಬಿಗನಾದ ಪರಮಾತ್ಮನೊಬ್ಬನೆ. ಅವನ ಕೈಗೆ ಜೀವನ ನೌಕೆಯ ಚುಕ್ಕಾಣಿಯನ್ನು ಕೊಡಬೇಕು. ಪುನಃ ನಾವು ಕೈಹಾಕಬಾರದು, ನಮ್ಮ ಮನಸ್ಸಿಗೆ ಬಂದಂತೆ ನಡೆಯಬಾರದು. ಬುದ್ಧಿಯನ್ನು ಆ ಒಬ್ಬ ಪರಮಾತ್ಮನಲ್ಲಿ ಸ್ಥಿರಗೊಳಿಸಬೇಕು. ಈ ರೀತಿಯಾಗಿ ವರದಾತನಿಂದ ನಿರ್ಭಯ ಮತ್ತು ನಿಶ್ಚಿಂತೆಯ ಮುತ್ತನ್ನು ಪಡೆದು ಅಭಯರಾಗಿರಿ.

ನಾನು ತಿಳಿಸಿದ ಐದನೇ ಪ್ರಕಾರದ ಭಯವು ದಿವ್ಯಗುಣಗಳ ಮತ್ತು ಆತ್ಮಬಲದ ಕೊರತೆಯಿಂದ ಬರುತ್ತದೆ. ಮನುಷ್ಯನು ತನ್ನ ಯಾವುದೋ ದುರ್ಗು-ಣದ ವಶನಾಗಿ ಯಾರೊಡನೆಯೋ ಅನುಚಿತ ವ್ಯವಹಾರ ನಡೆಸಿ ಕುಳಿತು ಬಿಡುತ್ತಾನೆ ಮತ್ತು ಆ ವ್ಯಕ್ತಿಯಿಂದ ತನಗಿನ್ನಾವ ಹಾನಿಯು ಕಾದಿದೆಯೋ ಎಂದು

ಚಿಂತೆಗೊಳಗಾಗಿ ಭಯಪಡುತ್ತಾನೆ, ಕೆಲವು ವ್ಯಕ್ತಿಗಳು ಆಸುರೀ ಸ್ವಭಾವಿಗಳೂ, ಜಗಳಗಂಟಿಗಳೂ ಆಗಿರುವರಲ್ಲದೆ ಇತರರನ್ನು ಪೀಡಿಸುವುದು, ತಪ್ಪು ತಿಳುವಳಿಕೆಯಿಂದ ಕೆಡುಕು ಬಗೆಯುವುದು ಇವುಗಳಲ್ಲೇ ತೊಡಗಿರುತ್ತಾರೆ. ಅಂತಹ ವ್ಯಕ್ತಿಯು ಯಾವ ಕೇಡನ್ನು ತಂದೊಡ್ಡುವನೋ ಎಂದು ಮನುಷ್ಯನು ಭಯಭೀತನಾಗುತ್ತಾನೆ. ಆದರೆ ಮನುಷ್ಯನಲ್ಲಿ ದಿವ್ಯ ಗುಣಗಳು ಮತ್ತು ಆತ್ಮ ಬಲವಿದ್ದಲ್ಲಿ ಅವನು "ನಾನು ಈ ಪರಿಸ್ಥಿತಿಯನ್ನು ಅಭ್ಯಾಸಿಸುತ್ತೇನೆ. ಈ ವ್ಯಕ್ತಿಯೊಡನೆ ಎಚ್ಚರದಿಂದಿರುತ್ತೇನೆ. ಇದಕ್ಕಾಗಿ ಹೆದರುವ ಆವಶ್ಯಕತೆಯಿಲ್ಲ ಮತ್ತು ನನ್ನಿಂದಲೇ ತಪ್ಪಾಗಿದ್ದರೆ ಆ ವ್ಯಕ್ತಿಯ ಬಳಿಗೆ ಹೋಗಿ ಕ್ಷಮೆಯಾಚಿಸುವುದು ಉಚಿತ. ತಪ್ಪೇ ಆಗಿಲ್ಲದಿದ್ದರೆ ಸತ್ಯತೆಯ ಬಲದ ಮೇಲೆ ಮತ್ತು ಈಶ್ವರನ ನಂಬಿಕೆಯ ಮೇಲೆ ನಿಶ್ಚಿಂತನಾಗಿರುತ್ತೇನೆ. ಸಮಯ ಸಾಗಿದಂತೆ ಏನೇ ಆಗಲಿ ಅದನ್ನು ದಿವ್ಯಗುಣಗಳ ಧಾರಣೆಯಿಂದಲೇ ಎದುರಿಸುತ್ತೇನೆ." ಎಂದು ಯೋಚಿಸುವನು.

ನಮ್ಮಲ್ಲಿ ದಿವ್ಯ ಗುಣಗಳ ಬಲವನ್ನು ತುಂಬಿಕೊಂಡರೆ, ಮಧುರತೆ, ಸಹನಶೀಲತೆ, ನಮ್ರತೆ ಹಾಗೂ ಸೇವಾಭಾವನೆಯಿಂದ ಸುಸಜ್ಜಿತರಾಗಿ ಮುನ್ನಡೆದರೆ ಬಹುಪಾಲು ಜನರು ನಮ್ಮ ಪಕ್ಷಕ್ಕೆ ಬರುವರು ಮತ್ತು ಅಂತಿಮ ವಿಜಯವು ನಮ್ಮದೇ ಆಗುವುದು. ಒಮ್ಮೊಮ್ಮೆ ಪರಿಣಾಮಗಳು ನಮಗೆ ತೊಂದರೆಯನ್ನುಂಟು ಮಾಡುವವುಗಳೇ ಆಗಬಹುದು. ಆಗ ಭಯಾನ್ವಿತರಾಗಿ ದುಃಖವನ್ನು ಹೆಚ್ಚಿಸುವುದರಿಂದಾಗುವ ಲಾಭವೇನು? ಏನಾಗುವುದೋ ಅದನ್ನು ನೋಡೋಣ. ಇನ್ನು ಸ್ವಲ್ಪ ಸಮಯದಲ್ಲಿಯೇ ಇದೆಲ್ಲವೂ ಭಸ್ಮೀಭೂತವಾಗಲಿರುವಾಗ ಇದಕ್ಕಿಂತಲೂ ಅಧಿಕವಾದುದಾವುದು? ನಮ್ಮ ಪವಿತ್ರತೆ, ಜ್ಞಾನ ಮತ್ತು ಯೋಗದ ಆಧಾರದಿಂದ ಮುಂಬರಲಿರುವ ಮಹಾವಿನಾಶಕ್ಕೇ ಹೆದರದಿರುವಾಗ ಈ ಸಣ್ಣಪುಟ್ಟ ವಿಪತ್ತುಗಳಿಗೆ ಹೆದರುವುದೆಲ್ಲಿ?

### ಜ್ಞಾನ ಮತ್ತು ಯೋಗವೆಂಬ ಅಸ್ತ್ರ-ಶಸ್ತ್ರಗಳಿಲ್ಲದ್ದರಿಂದ ಭಯ.

**ಜಿಜ್ಞಾಸು**—ಸಹೋದರಿಯವರೇ, ತಾವು ಭಯಕ್ಕೆ ಕಾರಣ ಮತ್ತು ಅದಕ್ಕೆ ನಿವಾರಣೆ ಇವನ್ನು ಬಹಳ ಸರಳ ಮತ್ತು ಸ್ಪಷ್ಟ ರೀತಿಯಲ್ಲಿ ನನಗೆ ವಿವರಿಸಿ ಹೇಳಿದಿರಿ. ಭಯಕ್ಕೆ ಮತ್ತಿನ್ನೇನಾದರೂ ಕಾರಣವಿದೆಯೆ?

ಬ್ರಹ್ಮಾಕುಮಾರಿ—ಒಬ್ಬನು ಮತ್ತೊಬ್ಬನೊಡನೆ ಯುದ್ಧಮಾಡಬೇಕಾಗಿ ಬಂದಾಗ ಅವನಲ್ಲಿ ಅಸ್ತ್ರ-ಶಸ್ತ್ರಗಳಿಲ್ಲದಿದ್ದರೆ ಅವನಿಗೆ ಅಧಿಕ ಭಯವಾಗುತ್ತದೆ. ಯಾರ ಬಳಿಯಲ್ಲಿ ಒಂದಲ್ಲ ಒಂದು ಶಸ್ತ್ರವಿರುತ್ತದೆಯೋ ಅವರಿಗೆ ಭಯವಿರುವುದಿಲ್ಲ ಅಥವಾ ಭಯವು ಕಡಿಮೆ ಇರುತ್ತದೆ. ಆದ್ದರಿಂದ ಯಾವುದೇ ಪರಿಸ್ಥಿತಿಯಲ್ಲಾಗಲಿ, ಯಾವುದೇ ಕಾರಣದಿಂದಾಗಲಿ ಮನುಷ್ಯನಿಗೆ ಭಯವುಂಟಾದರೆ ಅವನಲ್ಲಿ ಜ್ಞಾನ, ಯೋಗ ಈ ಅಸ್ತ್ರಗಳಲ್ಲಿಯೂ ಯಾವುದಾದರೂ ಕೊರತೆಯಿರಬೇಕೆಂದು ತಿಳಿಯುತ್ತದೆ. ಜ್ಞಾನ, ಯೋಗ, ನಿಶ್ಚಯ ಮೊದಲಾದ ಅಮೋಘ ಅಸ್ತ್ರ-ಶಸ್ತ್ರಗಳು ಅವನಲ್ಲಿದ್ದೇ ಆದರೆ ಅವನಲ್ಲಿ ಸಾಮರ್ಥ್ಯ, ಸಾಹಸ ಮತ್ತು ವಿಶ್ವಾಸಗಳು ಎದ್ದು ಕಾಣುತ್ತವೆ. ಏಕೆಂದರೆ ಅವನು "ಮಾಯೆಯು ಯಾವುದೇ ರೂಪದಲ್ಲಿ ಯುದ್ಧಮಾಡಲು ಬಂದರೂ ಅವೆಲ್ಲ ರೂಪಗಳ ತಿಳುವಳಿಕೆಯನ್ನು ಪರಮಾತ್ಮನು ನನಗೆ ಕೊಟ್ಟಿರುವನು. ಆ ಯುದ್ಧ ನೀತಿಯನ್ನು ಪರಮಾತ್ಮನು ವಿವರಿಸುವನು. ಮಾಯೆಯು ಹೇಗೆ ಹೇಗೆ, ಯಾವ ಯಾವ ರೂಪದಲ್ಲಿ ಯುದ್ಧ ಮಾಡುತ್ತದೆಯೋ, ಅದು ಯಾವ ಯಾವ ತಂತ್ರವನ್ನು ಪ್ರಯೋಗ ಮಾಡುವುದೋ ಅವೆಲ್ಲವುಗಳನ್ನೂ ಪರಮಾತ್ಮನು ನನಗೆ ಸ್ಪಷ್ಟಪಡಿಸಿರುವನು. ಇದಕ್ಕೂ ಅತಿರಿಕ್ತವಾಗಿ ಪರಮಾತ್ಮ ಶಿವನು ನನ್ನನ್ನು ಎಂತಹ ಅಸ್ತ್ರ ಶಸ್ತ್ರಗಳಿಂದ ಸಜ್ಜುಗೊಳಿಸಿರುವನೆಂದರೆ ಮಾಯೆಯು ಹೇಗೆ ಆಕ್ರಮಣಗೊಂಡರೂ ಅದನ್ನು ಹಿಮ್ಮೆಟ್ಟಿಸಲು, ಎದುರಿಸಲು ನಾನು ಶಕ್ತಿ ಶಾಲಿಯಾಗಿದ್ದೇನೆ ಮತ್ತು ಸ್ವಯಂ ಭಗವಂತನೇ ನನಗೆ ಮೇಲಿನಿಂದ ಶಕ್ತಿಯನ್ನು ಕೊಡುತ್ತಿರುವನು. ಆದ್ದರಿಂದ ನಾನು ಇವುಗಳ ಮೇಲೆ ವಿಜಯಗಳಿಸುವೆನು" ಎಂಬುದಾಗಿ ತಿಳಿದಿರುತ್ತಾನೆ. ಹಾಗಾದರೆ ಆ ನಮ್ಮ ಅಸ್ತ್ರ-ಶಸ್ತ್ರಗಳು ಯಾವುವು? – ಶಂಖ, ಚಕ್ರ, ಗದಾ, ಪದ್ಮ. ಸ್ವದರ್ಶನ ಚಕ್ರ ಮತ್ತು ಗದೆ ಇವು ಎಂತಹ ಶಸ್ತ್ರಗಳೆಂದರೆ ಇವುಗಳ ಸಹಾಯದಿಂದ ಮನುಷ್ಯನು ಸಹಜವಾಗಿ ಮಾಯೆಯ ಬಿರುಗಾಳಿಯಿಂದ ಪಾರಾಗಬಲ್ಲನು. ಈ ಶಸ್ತ್ರಗಳಲ್ಲದೆ ವಿಶ್ವನಾಟಕದ ಜ್ಞಾನ ರೂಪದ ಗುರಾಣಿಯೂ ಅವಶ್ಯಕ.

ಈ ಸಂಸಾರವು ಒಂದು ನಾಟಕವೆಂಬ ರಹಸ್ಯವನ್ನು ಮನುಷ್ಯನು ಪದೇ ಪದೇ ಮರೆಯುತ್ತಾನೆಯಾದ್ದರಿಂದ ಭಯವು ಬರುತ್ತದೆ. ಈ ನಾಟಕದ ಭವಿ

ಷ್ಯವು ಏನಾಗಿದೆಯೋ ಯಾವ ಚಲನಚಿತ್ರವು (Film) ಅನಾದಿಕಾಲದಲ್ಲೇ ಚಿತ್ರೀಕರಣ (Film School) ಆಗಿದೆಯೋ ಅದೇ ದೃಶ್ಯವು (Scen) ಮುಂದೆ ಬರಬೇಕು. ಇದು ಪುನರಾವರ್ತನೀಯ ನಾಟಕ; (Repetitive Drama) ಯಾವುದು ಹಿಂದಿನ ಆಟದಲ್ಲಿ (Show) ಅರ್ಥಾತ್ ೫೦೦೦ ವರ್ಷಗಳ (ಕಲ್ಪದ) ಹಿಂದೆ ನಡೆದಿತ್ತೋ ಈಗಲೂ ಅದೇ ನಡೆಯಬೇಕಾಗಿದೆ. ಅದಕ್ಕಿಂತ ಭಿನ್ನವಾಗಿ ಬೇರೆನೂ ನಡೆಯುವಂತಿಲ್ಲ. “ವಿಧಿ ಬರೆದ ಬರೆಹವ ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ” ಎಂಬ ಉಕ್ತಿಯೂ ಸಹ ಇದೆಯಲ್ಲವೆ? ಇದರಲ್ಲಿ ತೃಣ ಮಾತ್ರವನ್ನೂ ಬದಲಾಯಿಸಲು ಸಾಧ್ಯವಿಲ್ಲ. ಇದು ನಮ್ಮ ಕರ್ಮದ ಆಧಾರದ ಮೇಲೆ ತಯಾರಿಸಿದ ಚಲನಚಿತ್ರವಾಗಿದೆ. ನಾವು ಪೂರ್ವ ಕಾಲದಲ್ಲಿ ಯಾವ ಕರ್ಮಗಳನ್ನು ಮಾಡಿರುವೆವೋ ಅವುಗಳ ಆಧಾರದ ಮೇಲೆ ನಮ್ಮ ಭವಿಷ್ಯವು ಪೂರ್ವ ನಿಶ್ಚಿತ (Pre-ordained) ವಾಗಿದೆ. ಅದ್ದರಿಂದ ಯಾವುದು ಆಗಬೇಕಾಗಿದೆಯೋ (What is to be) ಅದನ್ನು ಆಗದಂತೆ (Not to be) ಮಾಡಲು ಸಾಧ್ಯವಿಲ್ಲ. ಹೀಗಿರುವಾಗ ಪುನಃ ಯಾವುದಕ್ಕಾಗಿ ಚಿಂತೆ, ಯಾರಿಗಾಗಿ ಭಯ? ಮುಂಚಿತ್ವಕ್ಕೆ ಚಿಂತಿಸಿ ಫಲವೇನು?” ಎಂದು ಹೇಳುವದಿಲ್ಲವೆ? ಭಯ ಅಥವಾ ಚಿಂತೆ ಮಾಡುವುದರಿಂದ ಏನೂ ಬದಲಾಗುವುದಿಲ್ಲವಾದ್ದರಿಂದ ಭಯ ಅಥವಾ ಚಿಂತೆಯ ಅರ್ಥವೇನು? ನಾವು ಮಾಡಬೇಕಾದ ಕರ್ಮವನ್ನು ಮಾಡಬೇಕು. ಅದರಿಂದ ಬರುವ ಪರಿಣಾಮಕ್ಕೆ ಬದ್ಧರಾಗಿರಬೇಕು. ಏಕೆಂದರೆ ನಾವು ಪರಿಶ್ರಮ, ಪುರುಷಾರ್ಥ, ಪ್ರಯತ್ನಗಳಿಗಿಂತಲೂ ಹೆಚ್ಚಾಗಿ ಮತ್ತೇನು ಮಾಡಲು ಸಾಧ್ಯ? ಪರಿಸ್ಥಿತಿಯನ್ನು ನಮ್ಮ ಕರ್ಮದಿಂದಲೇ ಬದಲಿಸಬೇಕು. ನಾವು ಕರ್ಮವನ್ನು ಶ್ರೇಷ್ಠ, ಉತ್ಸಾಹ ಮತ್ತು ಪೂರ್ಣ ಲಗ್ನದಿಂದ ಮಾಡಬೇಕು. ಆದರೆ ಅದರ ಭವಿಷ್ಯದ ಚಿಂತೆ ಅಥವಾ ಭಯದಿಂದ ತನ್ನನ್ನು ದುಃಖಿಯನ್ನಾಗಿ ಮಾಡಿಕೊಂಡರೆ ಅದು ‘ಕರ್ಮ’ದ ಶ್ರೇಣಿಯಲ್ಲಿ ಗಣನೆಗೆ ಬರುವುದಿಲ್ಲ. ಬದಲಾಗಿ ವಿಕಲ್ಪ, ವಿಕಾರ ಅಥವಾ ವಿಕರ್ಮದ ಶ್ರೇಣಿಯಲ್ಲಿ, ಯೋಗ ಭ್ರಷ್ಟತೆಯ ಶ್ರೇಣಿಯಲ್ಲಿ, ಈಶ್ವರನ ಮೇಲಿನ ಸಂಶಯದ ಶ್ರೇಣಿಯಲ್ಲಿ, ಹೇಡಿತನದ ಶ್ರೇಣಿಯಲ್ಲಿ ಹಾಗೂ ಪುರುಷಾರ್ಥದಲ್ಲಿ ತಾನೇ ಅಡಚಣೆಯಾಗಿ ತನಗೆ ವಿರುದ್ಧವಾಗಿ ತಾನೇ ಅಪರಾಧಿಯಾಗುವ ಶ್ರೇಣಿಯಲ್ಲಿ ಗಣನೆಗೆ ಬರಬೇಕಾಗುತ್ತದೆ. ಭಯದಲ್ಲಿ ಇಷ್ಟೊಂದು ದೋಷ ಮತ್ತು

ದುಃಖವಿರುವಾಗ ಭಯವನ್ನೂ ಅವರ ತಂಗಿಯಾದ ಚಿಂತೆಯನ್ನೂ ಆಹ್ವಾನಿಸು ವುದೇಕೆ? ಅವುಗಳು ಮನದೊಳಗೆ ನುಗ್ಗಲು ಬಿಡುವುದೇಕೆ? ಈ ಸಂಸಾರವೇ ಒಂದು ನಾಟಕ ಅಥವಾ ಆಟವಾಗಿರುವುದರಿಂದ ಇದನ್ನು ಒಂದು ಆಟವೆಂದೇ ಬಗೆದು (In the spirit of game) ಸೋಲು ಗೆಲುವುಗಳನ್ನು ನೋಡ ಬೇಕೇ ಹೊರತು ಸೋಲಾದುದಕ್ಕೆ ಭಯಾನ್ವಿತರಾಗ ಬಾರದು.

## ಸಾಕ್ಷಿ ಮತ್ತು ನಿಸ್ಸಂಕಲ್ಪ ಅವಸ್ಥೆಯನ್ನು ಧಾರಣೆ ಮಾಡುವುದರಿಂದ ಭಯ ಮತ್ತು ಚಿಂತೆಯಿಂದ ನಿವೃತ್ತಿ

'ಜಗವೇ ನಾಟಕ ರಂಗ' ಎಂಬ ರಹಸ್ಯವನ್ನು ತನ್ನ ವ್ಯವಹಾರಿಕ ಜೀವನ ದಲ್ಲಿ ಅರ್ಥಮಾಡಿಕೊಂಡರೆ ಆ ಮನುಷ್ಯನನ್ನು ಭಯ ಮತ್ತು ಚಿಂತೆಗಳು ಬಾಧಿಸುವುದಿಲ್ಲ. ಬದಲಾಗಿ ಅವನು ಇದೆಲ್ಲವನ್ನೂ ತನ್ನ ಪಾತ್ರವನ್ನು ಯಾರೋ ಇತರರು ನೋಡುವಂತೆ ಸಾಕ್ಷಿಯಾಗಿ ನೋಡುತ್ತಾನೆ. "ಏನಾಗು ವುದೋ ಎಂತಾಗುವುದೋ" ಎಂಬ ಪ್ರಶ್ನೆಯು ಅವನಲ್ಲಿ ಏಳುವುದಿಲ್ಲ. ನಿಸ್ಸಂಕಲ್ಪ ನಾಗಿರುತ್ತಾನೆ ಮತ್ತು ಪುರುಷಾರ್ಥವನ್ನು ಪೂರ್ಣ ರೀತಿಯಲ್ಲಿ ಮಾಡುತ್ತಾ ಪರಿ ಣಾಮದ ಬಗ್ಗೆ ಅನಾಸಕ್ತಿಯಿಂದ ನಿಸ್ಸಂಕಲ್ಪನಾಗಿರುತ್ತಾನೆ. ಏಕೆಂದರೆ — "ಏನಾಗಬೇಕೋ ಅದೇ ಆಗುವುದು ; ಕಲ್ಪದ ಹಿಂದೆ ಏನು ನಡೆದಿತ್ತೋ ಅದೇ ಈಗಲೂ ಪುನಃ ನಡೆಯುವುದು, ಮುನ್ನಡೆದು ಸಾಕ್ಷಿಯಾಗಿ ಅದನ್ನೂ ನೋಡು ತ್ತೇನೆ. ಅನೇಕ ಸಾರಿ ನಾನು ಈ ಪಾತ್ರವನ್ನು ಮಾಡಿರುವೆನು. ನಾನು ಚಿಂತೆಯಿಂದ ದೂರ, ನಿಶ್ಚಿಂತ. ಏಕೆಂದರೆ ನನ್ನ ಚಿಂತೆಗಳೆಲ್ಲವನ್ನೂ ಪರಮಾತ್ಮ ನಿಗೆ ಅರ್ಪಿಸಿರುವೆನು ಮತ್ತು ನಾನು ಫಕೀರ (ಸನ್ಯಾಸಿ) ನಾಗಿರುವೆನು. ಅದ್ದರಿಂದ ಸನ್ಯಾಸಿಗೆ ಯಾರ ಭಯ, ? ಯಾವುದರ ಚಿಂತೆ ? ಸನ್ಯಾಸಿಯಾದವರೋ ಪ್ರಭು ವಿನ ಚಿಂತೆಮಾಡುತ್ತಾ ಉಳಿದೆಲ್ಲಾ ಚಿಂತೆಗಳನ್ನೂ ಪರಮಾತ್ಮನ ವಶಕ್ಕರ್ಪಿಸಿರು ತ್ತಾನೆ. ಸನ್ಯಾಸಿಯು ಪರಮಾತ್ಮನ ಆಜ್ಞೆಯ ಮೇರೆಗೆ ಎಲ್ಲವನ್ನೂ ಮಾಡುತ್ತಾ ಅವನ ಕಲ್ಯಾಣಕಾರಿ ಹಾಗೂ ಶ್ರೇಷ್ಠ ಆಜ್ಞೆಯಂತೆ ನಡೆಯುವುದರಿಂದ ಅವನಿ ಗಾವ ಭಯ ? ಯಾವ ಚಿಂತೆ" ? ಈ ರೀತಿಯಾಗಿ ಅವನು ವಿಚಾರಮಾಡುತ್ತಾನೆ. ಅವನ ಬುದ್ಧಿಯಲ್ಲಿ ಭಾರದ ಅನುಭವವಾಗುವುದಿಲ್ಲ. ಸದಾ ಅವನಿಗೆ ಹಗುರದ

ಅನುಭವವಾಗುತ್ತದೆ. ಯಾರಾದರೂ ಚಿಂತಾಕ್ರಾಂತರಾಗಿ "ಈಗ ಏನಾಗು ವುದೋ! ?" ಎಂದು ಅವನನ್ನು ಕೇಳಿದರೆ "ಕಲ್ಪದ ಹಿಂದೆ ಅರ್ಥಾತ್ ೫೦೦೦ ವರ್ಷಗಳ ಹಿಂದೆ ಏನಾಗಿತ್ತೋ ಅದೇ ಆಗುತ್ತದೆ" ಎಂದು ಉತ್ತರಿಸಿ ಸಾಕ್ಷಿ ಮತ್ತು ನಿರ್ವಿಕಲ್ಪನಾಗಿ ಅವನನ್ನು ದೃಷ್ಟಿಸುತ್ತಾನೆ. ಹಾನಿ, ಪರಾಜಯಗಳೇ ನಾದರೂ ಆದಾಗ ಯಾರಾದರೂ ಹೋಗಿ ಅವನನ್ನು "ಕೆಟ್ಟದಾಗಿ ಬಿಟ್ಟಿತು ಇದರಿಂದ ಬಹಳ ಕೆಡುಕಾಯಿತು. ಈಗ ನೀವೇನು ಮಾಡುವಿರಿ? ಮುಂದೇನು ಗತಿ?" ಎಂದು ಕೇಳಿದರೆ ಅದಕ್ಕೆ ಅವನು—"ಸಹೋದರಾ, ಇದೇನು ಹೊಸ ವಿಷಯ ವಲ್ಲ. (Nothing new) ಇದು ಅಸಂಖ್ಯ ಸಾರಿ ಆಗಿ ಹೋಗಿದೆ, ಇದಕ್ಕೇಕೆ ಗಾಭರಿ ಪಡುವುದೇಕೆ? ಇದು ಪೂರ್ವ ನಿಶ್ಚಿತವಾದ ಅಥವಾ ಸಂಸಿದ್ಧವಾದ ನಾಟಕವಾಗಿದೆ! ಮುಂದೇನಾಗುವುದೋ ಅದನ್ನು ನಾವೂ ನೀವೂ ಎಲ್ಲರೂ ನೋಡೋಣ, ಈಗಲೇ ಅದರ ಬಗ್ಗೆ ಚಿಂತೆಯೇಕೆ? ವ್ಯರ್ಥ ಸಂಕಲ್ಪಗಳನ್ನೇಕೆ ನಡೆಸಬೇಕು? ಶಿವ ತಂದೆಯನ್ನು ನೆನೆಯುವುದಕ್ಕೆ, ಶ್ರೇಷ್ಠ ಕರ್ಮವನ್ನು ಮಾಡು ವುದಕ್ಕೆ, ಹಿಂದೆ ಮಾಡಿರುವ ವಿಕರ್ಮಗಳನ್ನು ಯೋಗಬಲದಿಂದ ದಗ್ಧವಾಡು ವುದಕ್ಕೆ ಯೋಚನೆ ಮಾಡಬೇಕು. ಇಲ್ಲದಿದ್ದಲ್ಲಿ ಧರ್ಮರಾಜನಿಂದ ದಂಡ ಯನ್ನನುಭವಿಸಬೇಕಾದೀತು. ಇನ್ನು ಉಳಿದ ಚಿಂತೆ, ಸಂಕಲ್ಪಗಳೆಲ್ಲವು ವ್ಯರ್ಥ." ಎಂದು ಹೇಳುವನು.

**ಜಿಜ್ಞಾಸು**—ಧರ್ಮ ರಾಜನಿಂದೊದಗುವ ದಂಡನೆಯ ಭಯವು ಹೇ ಕಲ್ಯಾಣಕಾರಿಯಾದದ್ದು ?

**ಕೇವಲ ಒಂದು ಭಯ ಮತ್ತು ಒಂದೇ ಚಿಂತೆ ಕಲ್ಯಾಣಕಾರಿಯಾದು**

**ಬ್ರಹ್ಮಾಕುಮಾರಿ** — ಉಳಿದೆಲ್ಲ ಪ್ರಕಾರದ ಭಯಗಳೂ ದುಃ ದಾಯಕ ಮತ್ತು ಹಾನಿಕಾರಕವಾದವುಗಳು ಮತ್ತು ಎಲ್ಲಾ ಚಿಂತೆಗಳೂ ಚಿ ಯೋಪಾದಿಯಲ್ಲಿ ಮನುಷ್ಯನನ್ನು ಸುಡುವವುಗಳೇ ಆಗಿವೆ. ಯಮಧರ್ಮ ದಂಡನೆಯ ಭಯ ಮತ್ತು ಶಿವ ತಂದೆಯ ಚಿಂತೆ ಸುಖದಾಯಕವಾದವು ಏಕೆಂದರೆ ಈ ಭಯ ಮತ್ತು ಚಿಂತೆಯಿಂದ ಮನುಷ್ಯನು ಕೆಟ್ಟಕರ್ಮಗಳಿಂದ ದೂ ನಾಗುವನು, ಶ್ರೇಷ್ಠ ಕರ್ಮ ಮಾಡತೊಡಗುವನು ಮತ್ತು ಹಿಂದೆ ಮಾಡಿ ವಿಕರ್ಮಗಳಿಂದ ಈಶ್ವರೀಯ ನೆನಪಿನ ಮೂಲಕ ಮುಕ್ತನಾಗುವನು. ಯಾ

ಈ ಭಯ ಮತ್ತು ಚಿಂತೆಯನ್ನಿಟ್ಟುಕೊಂಡಿರುವರೋ ಅವರು ಉಳಿದ ಸರ್ವ ಪ್ರಕಾರದ ಭಯ ಮತ್ತು ಚಿಂತೆಯಿಂದ ಸದಾಕಾಲ ಬಿಡುಗಡೆ ಹೊಂದುವರು.

ಆದ್ದರಿಂದ ಮನುಷ್ಯನು ಶಂಖ, ಚಕ್ರ, ಗದೆ, ಪದ್ಮ ಮೊದಲಾದ ಅಲಂಕಾರಗಳನ್ನು ಅಥವಾ ಅಸ್ತ್ರ-ಶಸ್ತ್ರಗಳನ್ನು ಧಾರಣೆಮಾಡಬೇಕು ಮತ್ತು ಸೃಷ್ಟಿಯನ್ನು ಒಂದು ನಾಟಕವೆಂದು ತಿಳಿಯಬೇಕು ಹಾಗೂ ತನ್ನಲ್ಲಿ ಶ್ರದ್ಧೆ ವಿಶ್ವಾಸ, ನಿಶ್ಚಯ (Faith) ವನ್ನಿಟ್ಟಿರಬೇಕು. ಏಕೆಂದರೆ **ಶ್ರದ್ಧೆಯೇ ಸಿದ್ಧಿಗೆ ಮೂಲ** ಮತ್ತು **ನಿಶ್ಚಯದಲ್ಲಿಯೇ ವಿಜಯ.** ಆದ್ದರಿಂದಲೇ "ನಿಶ್ಚಯಾತ್ಮಕ ವಿಜಯಂತಿ," "ಸಂಶಯಾತ್ಮಾವಿನಶ್ಯತಿ" ಎಂದು ಹೇಳಲಾಗಿದೆ. ನಿಶ್ಚಯವಿದ್ದಲ್ಲಿ ವಿಜಯವಿದ್ದೇ ಇದೆ ಮತ್ತು ಭಗವಂತನೊಡನೆ ನಮ್ಮ ಸಂಬಂಧವು ಸರಿಯಾಗಿದ್ದರೂ ವಿಜಯವಿದೆ. ಇದು ಗೀತೆಯಲ್ಲಿಯೂ ಹೇಳಲ್ಪಟ್ಟಿದೆ. ಆಗ ಭಯ, ಚಿಂತೆ, ಕಳವಳ ಇವುಗಳ ಮಾತೇ ಇಲ್ಲ.

**ಜಿಜ್ಞಾಸು —** ಸಹೋದರಿಯವರೇ, ಕಳವಳಕ್ಕೂ ಸಹ ಏನಾದರೂ ಬೇರೆ ಕಾರಣವಿದೆಯೇ ? ಅದರ ನಿವಾರಣೆಗೆ ಯುಕ್ತಿಯೇನು ?

**ಬ್ರಹ್ಮಾಕುಮಾರಿ—** ಕಳವಳವೂ ಸಹ ಭಯ ಅಥವಾ ಚಿಂತೆಯ ಒಂದು ರೂಪ. ಯಾವುದಾದರೂ ಕಠಿಣ ಪರಿಸ್ಥಿತಿ ಬಂದಾಗ ಅದನ್ನು ಕೇಳಿ, ನೋಡಿ ಅಥವಾ ಯೋಚಿಸಿ ಮನುಷ್ಯನ ಮುಖ ಬಿಳುಪೇರುವುದು ಅಥವಾ ಕಳವಳಗೊಳ್ಳುವುದು ಭಯಭೀತರಾದವರ ಚಿಹ್ನೆ. ವಾಸ್ತವವಾಗಿ ಆ ರೀತಿ ಆಗಬಾರದು. ಏಕೆಂದರೆ ಏನಾಗಬೇಕಿತ್ತೋ ಅದು ಆಯಿತು ಮತ್ತು ವಿಶ್ವ ನಾಟಕದ ಭವಿಷ್ಯದನುಸಾರ ಸರ್ವಥಾ ಸರಿಯಾಗಿ (accurate) ನಡೆಯಿತು. ಕರ್ಮ ಮತ್ತು ಕರ್ಮ ಫಲದ ನಿಯಮದ ಅನುಸಾರ ನಡೆಯಿತು. ಇದಕ್ಕಾಗಿ ತೃಣಮಾತ್ರವೂ ಸಂದೇಹವೇಳಬಾರದು. ಈ ಸೃಷ್ಟಿ ನಾಟಕವು (World drama) ಯಥಾರ್ಥವಾಗಿ ರಚಿಸಲ್ಪಟ್ಟಿರುವುದರಿಂದ ಇದರಲ್ಲಿ ಸಂಶಯಕ್ಕೆ ಆಸ್ಪದವೇ ಇಲ್ಲ. ಇದರಲ್ಲಿ ನಿಮಿಷ ನಿಮಿಷಕ್ಕೂ ಏನು ನಡೆಯುವುದೋ ಅದರ ಕಾರಣವಿದೆ; ಅದರಲ್ಲಿ ಗಹನ ರಹಸ್ಯವಿದೆ, ಅದು ನಮಗೆ ಕಾಣಲಿ ಅಥವಾ ಕಾಣ

ದಿರಲಿ, ಅದರ ಬಗ್ಗೆ ವ್ಯರ್ಥ ಚಿಂತೆ ಮಾಡುವುದೆಂದರೆ ಸಮಯ, ಶಕ್ತಿಗಳನ್ನು ವ್ಯರ್ಥಮಾಡಿದಂತೆ ಮತ್ತು ತನ್ನ ಮಿಥ್ಯಾಹಂಕಾರವನ್ನು ತೋರಿಸಿದಂತೆ. ಯಾವುದು ನಡೆಯಿತೋ ನಡೆಯುತ್ತಿದೆಯೋ, ನಡೆಯುವುದೋ ಅದೆಲ್ಲವೂ ಸರ್ವಥಾ ಅನಾದಿ ನಿಶ್ಚಿತ ಭವಿಷ್ಯದನುಸಾರವಾಗಿ ನಡೆಯುತ್ತದೆ ಮತ್ತು ನಡೆಯುವದು. ನಮ್ಮ ಕರ್ಮವನ್ನು ನಿರ್ವಿಕಾರವಾಗಿಟ್ಟುಕೊಂಡು ನಿಶ್ಚಿಂತರಾಗಿರುವುದೇ ನಮ್ಮ ಕರ್ತವ್ಯ. ಜಗನ್ನಾಟಕದ ಬಗ್ಗೆ ಸಂಶಯ ಪಡುವುದಕ್ಕೆ ಬದಲಾಗಿ ಮನುಷ್ಯನು ತನ್ನನ್ನು ಸುಧಾರಿಸಿಕೊಳ್ಳುವುದರಲ್ಲಿ ತತ್ಪರನಾಗಬೇಕು. ಇದರಿಂದ ಅವನ ಭವಿಷ್ಯವೂ ಸುಧಾರಿಸಲ್ಪಡುತ್ತದೆ, ಅವನ ಮನದಿಂದ ಭಯ, ಚಿಂತೆಗಳೂ ತೊಲಗುತ್ತವೆ ಮತ್ತು ಅವನು ಸುಸ್ಥಿರನೂ ಹಾಗೂ ಸ್ಥಿತಪ್ರಜ್ಞನೂ ಆಗುತ್ತಾನೆ.

ಈ ನಾಟಕವನ್ನು ನೆನಪಿನಲ್ಲಿಟ್ಟು ಸಹ ಮನುಷ್ಯನು ವಿಸ್ಮಯ, ಕಳವಳಗಳಿಂದ ಕಂಗೆಟ್ಟು ಭಯ ಅಥವಾ ಚಿಂತೆಯಿಂದ "ಇದೇನಾಯಿತು ? ಎಂದು ಹೇಳಬಾರದು. ಒಂದು ವೇಳೆ ಹಾಗೆ ಯಾರಾದರೂ ಹೇಳಿದರೆ ಅವರಿಗೆ—" ಏನಾಯಿತೆಂದು ನಿಮಗೆ ಗೊತ್ತಿಲ್ಲವೆ? ಸಂಗಮಯುಗ ಬಂದಿತು. ಪರಮಾತ್ಮ ಶಿವನ ದಿವ್ಯ ಜನ್ಮವಾಯಿತು, ಅವರು ಪ್ರಜಾಪಿತ ಬ್ರಹ್ಮರವರ ಮೂಲಕ ಜ್ಞಾನವನ್ನು ಕೊಟ್ಟರು...........ಇಂತಹ ಚರಿತ್ರೆಯೆಲ್ಲವೂ ನಡೆಯಿತು." ಎಂದು ಹೇಳಿ ಅವರ ಗಮನವನ್ನೂ ಜ್ಞಾನದತ್ತ ಎಳೆಯಬೇಕು ಮತ್ತು ವಿಷಯವನ್ನು ಹಗುರ ಮಾಡಿಬಿಡಬೇಕು. ಮುಂದಕ್ಕಾಗಿ ತೀವ್ರ ಪುರುಷಾರ್ಥ ನಡೆಸಲು ಪ್ರೋತ್ಸಾಹಿಸಬೇಕು.

## ಸ್ಥಿರ ಮತ್ತು ಏಕರಸಾವಸ್ಥೆ.

ಮಾಯೆಯು ಮನುಷ್ಯನ ಮನಸ್ಸನ್ನು ಬುಡ ಮೇಲು ಮಾಡುತ್ತದೆ. ಈರ್ಷೆ, ದ್ವೇಷ, ಭಯ, ನಿಂದೆ, ಲೋಕ-ಲಜ್ಜೆ, ವಿಘ್ನ, ಕಠಿಣತೆ ಮೊದಲಾದವುಗಳನ್ನು ಸಹನೆಮಾಡುವುದರ ಕೊರತೆ ಹಾಗೂ ಕಾಮ, ಕ್ರೋಧಾದಿವಿಕಾರಗಳ ಅಥವಾ ಪೂರ್ವ ಸಂಸ್ಕಾರಗಳ ಯುದ್ಧ, ಒಬ್ಬರಿಗೊಬ್ಬರ ಸ್ವಭಾವಗಳ ತಾಕಲಾಟ ಹಾಗೂ ಮತ ಭೇದ, ಪರೀಕ್ಷೆಗಳನ್ನು ಪಾರುಮಾಡುವ ಶಕ್ತಿಯ ಕೊರತೆ

ಮೊದಲಾದವುಗಳೆಲ್ಲವೂ ಮನುಷ್ಯನ ಅವಸ್ಥೆಯನ್ನು ಏಕರಸವಾಗಿಡಲು ಬಿಡು ವುದಿಲ್ಲ ಮತ್ತು ಎಲ್ಲಕ್ಕಿಂತ ಮೊದಲು ಅವನ ನಿಶ್ಚಯವನ್ನು ಅಥವಾ ಅವನ ಈಶ್ವರೀಯ ಲಗ್ನವನ್ನು ಅಥವಾ ಅವನ ಸನ್ಯಾಸವನ್ನು ಅಥವಾ ಅವನ ಯೋಗ ವನ್ನು ಭಂಗಪಡಿಸಲು ಪ್ರಯತ್ನಪಡೆಯುತ್ತವೆ. ಮನುಷ್ಯನು ಯಾವ ವಿಷಯ ದಲ್ಲಿ ನಿರ್ಬಲನಾಗಿರುತ್ತಾನೆಯೋ ಮಾಯೆಯು ಅವರ ಮೇಲೆಯೇ ಯುದ್ಧ ಮಾಡುತ್ತದೆ ಮತ್ತು ಅನೇಕ ವೇಳೆ ಮಾಯೆಯು ನಾಲ್ಕೂ ಕಡೆಗಳಿಂದ ಮುತ್ತಿಗೆ ಹಾಕಿ ಮನುಷ್ಯನನ್ನು ತನ್ನವನನ್ನಾಗಿ ಮಾಡಿಕೊಳ್ಳಲು ಪ್ರಲೋಭನ ಮಾಡು ತ್ತದೆ ಅಥವಾ ಅವನನ್ನು ಕೆಳಗೆ ಬೀಳಿಸಲು ಮತ್ತು ತಪಸ್ಸಿನಲ್ಲಿ ಮುಳುಗಿಸಲು ತಂತ್ರ ಹೂಡುತ್ತದೆ. ಆದ್ದರಿಂದ ಸ್ಥಿರ (ಅಡೋಲ) ಮತ್ತು ಏಕರಸ ಅವಸ್ಥೆ ಯನ್ನು ಧಾರಣೆಮಾಡಲು ಮನುಷ್ಯನು ಈಶ್ವರ, ಮಾಯೆ ಹಾಗೂ ಪುರುಷಾರ್ಥದ ರೀತಿ ಇವುಗಳನ್ನು ಪೂರ್ಣ ರೂಪದಲ್ಲಿ ಅರಿಯಬೇಕು; ಅರ್ಥಮಾಡಿಕೊಳ್ಳ ಬೇಕು. ವಾಸ್ತವವಾಗಿ ಈಶ್ವರನನ್ನು ಅರ್ಥಮಾಡಿಕೊಳ್ಳುವುದು ಕಠಿಣವಲ್ಲ. ಏಕೆಂದರೆ ಅವನು ಒಬ್ಬ, ಅವನ ಯಥಾರ್ಥ ಪರಿಚಯವೂ ಒಂದೆ ಮತ್ತು ಅವನು ಏಕರಸವಾಗಿರುವವನು. ಆದರೆ ಮಾಯೆಯು ಅನೇಕಾನೇಕ ರೂಪಗಳನು ಧಾರಣೆಮಾಡುತ್ತದೆ. ಈಶ್ವರನ ರೂಪವೇನೋ ಎನ್ನುವವರಿಗೆ ತನ್ನ ರೂಪ ವನ್ನು ಧರಿಸಿ ಬರುತ್ತದೆ. ನಾನು ನಿಮಗೆ ಮೊದಲು ಅಂತರ್ಮುಖತೆ, ಸಹನ ಶೀಲತೆ, ಧೈರ್ಯ, ಸಂತೋಷ, ನಮ್ರತೆ, ನಿರ್ಭಯತೆ ಮೊದಲಾದ ಗುಣಗಳನ್ನು ಧಾರಣೆಮಾಡಲು ಯುಕ್ತಿಗಳನ್ನು ಹೇಳಿರುವೆನು. ಅದಕ್ಕೂ ಮೊದಲು ಪಂಚ ವಿಕಾರಗಳ ಮೇಲೆ ವಿಜಯಗಳಿಸುವ ಯುಕ್ತಿಗಳನ್ನು ವಿವರಿಸಿದ್ದೆನು ಅವುಗಳನ್ನು ಪ್ರಾಯೋಗಿಕವಾಗಿ ಅಭ್ಯಾಸಮಾಡಿ ಆಚರಣೆಗೆ ತಂದರೆ ಮಾತ್ರ ಅವಸ್ಥೆಯನ್ನು ಸ್ಥಿರ (ಅಡೋಲವನ್ನಾಗಿ) ಮಾಡುವ ಪುರುಷಾರ್ಥ ನಡೆಯಲು ಸಾಧ್ಯ. ಇವೆಲ್ಲ ಕ್ಕಿಂತ ಅತ್ಯಮೂಲ್ಯ ಯುಕ್ತಿಯೆಂದರೆ— ಪ್ರತಿ ದಿನ ಶಿವ ಪರಮಾತ್ಮನ ಜ್ಞಾನ ಮುರುಳಿಯನ್ನು ಕೇಳುವುದು, ಪ್ರತಿ ದಿನ ಜ್ಞಾನ–ಕಕ್ಷೆಗೆ (class) ಹೋಗು ವುದು, ನಿಮಗಿಂತಲೂ ಅಧಿಕ ಜ್ಞಾನ–ನಿಷ್ಠ ಯೋಗಯುಕ್ತರಾದ ಸಹೋದರ– ಸಹೋದರಿಯರೊಡನೆ ಬೆರೆತು ಅವರ ಅನುಭವ, ಸದ್ವಿಚಾರಗಳನ್ನು ನಿಮ್ಮಲ್ಲಿ ತುಂಬಿಕೊಳ್ಳಬೇಕು. ವಿಕಾರಗಳನ್ನು ನೀವು ಎಷ್ಟೆಷ್ಟು ಬಿಡುತ್ತಾ, ದಿವ್ಯಗುಣ

ಗಳನ್ನೂ ಧಾರಣೆಮಾಡುತ್ತಾ ಹೋಗುವಿರೋ, ಈಶ್ವರೀಯ ಸ್ಮೃತಿಯಲ್ಲಿ ಹಾಗೂ ಆತ್ಮ ನಿಶ್ಚಯದಲ್ಲಿರುವಿರೋ ಮತ್ತು ಜ್ಞಾನದ ತಳಪಾಯವನ್ನು ಹಾಗೂ ನಿಶ್ಚಯವನ್ನು ಸುಭದ್ರ ಮಾಡುವಿರೋ ಅಷ್ಟಷ್ಟೇ ನಿಮ್ಮ ಸ್ಥಿತಿಯು ಅಚಲ, ಅಡೋಲ, (ಸ್ಥಿರ) ಅಥವಾ ಏಕರಸವಾಗುತ್ತಾ ಬರುತ್ತದೆ ಮತ್ತು ಈ ನಿಸ್ಸಂಕಲ್ಪ ಹಾಗೂ ಸ್ಥಿರತೆಯಿಂದಲೇ ನೀವು ಅಂತಿಮ ಲಕ್ಷ್ಯ ಅಥವಾ ಸ್ವರೂಪ ಸ್ಥಿತಿಯನ್ನು ತಲುಪುವಿರಿ. ಇಂದು ಮನುಷ್ಯನು ಯಾರ ನೆರವನ್ನು ಪಡೆದಿರುವನೋ ಅವರೇ ಏರುಪೇರಾಗುವರು, ಅವನ ಮನಸ್ಸು ಪವಿತ್ರತೆಯ ಮರ್ಯಾದೆಯಿಂದ ದೂರವಾಗುತ್ತದೆ, ಅವನು ಯಾವ ದೇಹದ ಅಭಿಮಾನ ವನ್ನಿಟ್ಟಿರುವನೋ ಆ ದೇಹವೂ ಅಸ್ಥಿರ, ವಿನಾಶಿ ಮತ್ತು ಪರಿವರ್ತನಶೀಲ ವಾದದ್ದು. ಯಾವ ರಸಗಳ ಹಿಂದೆ ಅವನು ಓಡುತ್ತಿರುವನೋ ಆ ರಸಗಳೂ ಅಲ್ಪಕಾಲದವುಗಳು. ಹೀಗಿರುವಾಗ ಅವನ ಅವಸ್ಥೆಯು ಏಕರಸವಾಗಿರಲು ಸಾಧ್ಯವೇ? ಸದಾ ಏಕರಸವಾಗಿರುವವನು ಒಬ್ಬ ಪರಮಾತ್ಮನು ಮಾತ್ರ ಮತ್ತು ಅವನ ನೆನಪಿನಲ್ಲಿ ಏಕತ್ರ, ಏಕತಾನ ಹಾಗೂ ಏಕನಾದವಾಗಿ ಕುಳಿತುಕೊಳ್ಳು ವುದೇ ಏಕರಸ ಅವಸ್ಥೆಯನ್ನು ಪ್ರಾಪ್ತಿಮಾಡಿಕೊಳ್ಳಲು ಸರ್ವಶ್ರೇಷ್ಠ ಯುಕ್ತಿಯಾಗಿದೆ.

**ಜಿಜ್ಞಾಸು—**ತಾವುಗಳು ಉತ್ತಮ ವಿಷಯವನ್ನೇ ತಿಳಿಸಿದಿರಿ. ಸಹೋ-ದರಿಯವರೇ ಅಡೋಲ ಹಾಗೂ ಏಕರಸ ಅವಸ್ಥೆಯನ್ನು ಧಾರಣೆ ಮಾಡಲು ಮತ್ತಿನ್ನಾವ ಯುಕ್ತಿಗಳಿವೆ?

**ಬ್ರಹ್ಮಾಕುಮಾರಿ —** ಪರಮಾತ್ಮ ಶಿವನು ಇದಕ್ಕಾಗಿ ಇನ್ನೂ ಬಹಳ ಅಮೂಲ್ಯ ಯುಕ್ತಿಗಳನ್ನೂ ಹೇಳಿರುವನು. ಈ ಸೃಷ್ಟಿಯು ಒಂದು ರಂಗ ಮಂಟಪ. ಇದರಲ್ಲಿ ಸುಮಾರು ೫೦೦ ಕೋಟಿ ಮಾನವರಿದ್ದು ಅವರೆಲ್ಲರೂ ತಮ್ಮ ಪಾತ್ರಗಳನ್ನು ನೋಡುತ್ತಿರುವರೆಂದು ತಿಳಿಯಬೇಕು. ಇದರಿಂದ ನಿಮ್ಮ ಪೂರ್ಣ ಗಮನವು (attention) ನಿಮ್ಮ ಕರ್ಮಗಳ ಮೇಲೆ ಇರುತ್ತದೆ ಮತ್ತು ಧ್ಯಾನವಿರುವುದರಿಂದ ನಿಮ್ಮ ಸ್ಥಿತಿಯು ಚೆನ್ನಾಗಿರುತ್ತದೆ ಹಾಗೂ ಅಡೋಲವಾಗಿರುತ್ತದೆ. ಉದಾಹರಣೆಗೆ ಒಬ್ಬ ವ್ಯಕ್ತಿಯು ವೇದಿಕೆಯ ಮೇಲೆ ಭಾಷಣ ಮಾಡುವವರ ಪಕ್ಕದಲ್ಲಿ ಕುಳಿತು ಭಾಷಣ ಕೇಳುತ್ತಾ ತೂಕಡಿಸಿದರೆ

ಪಕ್ಕದವರು ಅವನನ್ನು ಶ್ರೋತೃ ವರ್ಗದವರು ನೋಡುತ್ತಿರುವರೆಂದು ಎಚ್ಚರಿಸಿ
ದಲ್ಲಿ ಅವನು ಬೇಗನೇ ಸರಿಯಾಗಿ ಕುಳಿತುಕೊಳ್ಳುವನು, ತನ್ನ ಬಗ್ಗೆ ಶ್ರೋತೃ
ವರ್ಗದವರು ಏನೆಂದು ತಿಳಿಯುವರೋ ಎಂದು ಯೋಚಿಸುವನು. ಇದೇ ಪ್ರಕಾರ
ವಾಗಿ ಶಿವ ತಂದೆಯವರು ಹೇಳುವಂತೆ "ನಾನು ರಂಗಮಂಚದ ಮೇಲಿದ್ದೇನೆ
ಇಡೀ ಪ್ರಪಂಚದ ದೃಷ್ಟಿಯು ನನ್ನ ಕಡೆಗಿದೆ" ಎಂದು ನೀವು ಯೋಚಿಸಿದಾಗ
ನಿಮ್ಮ ಅವಸ್ಥೆಯ ಮೇಲೆ ನಿಮಗೆ ಪೂರ್ಣ ಗಮನವಿರುತ್ತದೆ. ಒಬ್ಬ ಮನುಷ್ಯನು
ಈಶ್ವರೀಯ ಜ್ಞಾನವನ್ನು ಪಡೆದು ಇತರರಿಗೂ ಅದನ್ನು ತಿಳಿಸತೊಡಗಿದಾಗ
ಅವನು ಏನು ಮಾಡುತ್ತಾನೆ, ಹೇಗೆ ನಡೆಯುತ್ತಾನೆಂದು ಎಲ್ಲರೂ ಅವನ ಕರ್ಮ
ಗಳನ್ನೇ ನೋಡುತ್ತಿರುತ್ತಾರೆ.

ಯಾರಾದರೂ ತಮ್ಮ ಫೋಟೋವನ್ನು ತೆಗೆಸಿಕೊಳ್ಳಲು ಕ್ಯಾಮರಾದ
ಮುಂದೆ ಕುಳಿತುಕೊಳ್ಳಬೇಕಾದರೆ ತಮ್ಮ ಫೋಟೋ ಕೆಡದೆ ಸುಂದರವಾಗಿ ಬರ
ಲೆಂದು ಸಿಂಗರಿಸಿಕೊಂಡು ಸುಸಜ್ಜಿತರಾಗಿ ಎಚ್ಚರಿಕೆಯಿಂದ ಅಲುಗಾಡದೆ ಕುಳಿತು
ಕೊಳ್ಳುವರು. ಇದೇ ರೀತಿಯಲ್ಲಿ ಈಗ ಪುರುಷೋತ್ತಮ ಸಂಗಮಯುಗವು ನಡೆ
ಯುತ್ತಿದೆ, ಇದರಲ್ಲಿ ನಮ್ಮ ಭವಿಷ್ಯದ ಜನ್ಮ ಜನ್ಮಾಂತರಗಳ ಪಾತ್ರದ ಚಲನ
ಚಿತ್ರ ತೆಗೆಯಲಾಗುತ್ತಿದೆ ಅರ್ಥಾತ್ ನಮ್ಮ ಭವಿಷ್ಯವು ರಚಿತವಾಗುತ್ತಿದೆ. ಈ
ಅಂಶವನ್ನು ಗಮನದಲ್ಲಿಡುವುದರಿಂದ ಅವಸ್ಥೆಯು ಏರುಪೇರಾಗದೆ ಚಿತ್ತಸ್ಥೈರ್ಯ
ವುಂಟಾಗುತ್ತದೆ.

ಹಠಯೋಗಿ ಹಾಗೂ ತತ್ವಯೋಗಿಗಳು ಹೇಳುವಂತೆ ಮನುಷ್ಯನು ಯೋಗಾ
ಭ್ಯಾಸಕ್ಕಾಗಿ ಕುಳಿತಾಗ ನೇರವಾಗಿ ಕುಳಿತುಕೊಳ್ಳಬೇಕು ಕಣ್ಣುಗಳನ್ನು ಮುಚ್ಚಿರ
ಬೇಕು ಮತ್ತು ಶರೀರವು ಅಲುಗಾಡಬಾರದು. ಆದರೆ ಶಿವತಂದೆಯರು ಹೇಳು
ವರು – ರಾಜಯೋಗಿಗಳು ಶರೀರದ ಮಾತನ್ನು ಬಿಟ್ಟು ಮನಸ್ಸನ್ನು ಅಲುಗಾಡ
ದಂತೆ ಇಡಬೇಕು ಮತ್ತು ಈ ಕಲಿಯುಗದ ಶೋಭೆಯನ್ನು ನೋಡಲು ಕಣ್ಣು
ಗಳು ಆಕರ್ಷಿಸಬಾರದು ಮತ್ತು ಮನಸ್ಸಿನ ಸ್ಥಿತಿಯನ್ನು ಸ್ಥಿರಗೊಳಿಸಿ, ಕುಳಿತು
ಕೊಳ್ಳುವುದರಿಂದ ಅವಸ್ಥೆಯು ಅಡೋಲ (ಸ್ಥಿರ) ವಾಗುವುದು.

ಹಾಗೆಯೇ ಶಿವತಂದೆಯವರು ಹೇಳುವರು – "ಈ ರಾವಣ ರಾಜ್ಯದಲ್ಲಿ
ಮಾಯಾರೂಪದ ಅಸುರ ಸೇನೆಯು ಯುದ್ಧವಾಗಿಯೇ ತೀರುತ್ತದೆ. ಮಾಯೆಯು
ಅನೇಕ ಪ್ರಕಾರದಲ್ಲಿ ನಿಶ್ಚಯದ ಕಾಲುಗಳನ್ನು ಅಲುಗಾಡಿಸಲು ಪ್ರಯತ್ನಿಸು

ತ್ತದೆ. ಆದರೆ ನೀವು ಅಂಗದನಂತೆ ನಿಶ್ಚಲವಾಗಿರಬೇಕು." ಅಂಗದ' ಎಂಬ ಪದವು 'ಅಂಗ' ಮತ್ತು 'ದ' ಎಂಬ ಶಬ್ದಗಳಿಂದಾಗಿದೆ. ಯಾರು ತನ್ನ ಅಂಗಾಂಗಗಳನ್ನೂ ಪರಮಪಿತ ಪರಮಾತ್ಮನಿಗೆ ದಾನವಾಗಿ ಕೊಟ್ಟಿರುವನೋ ಅವನೇ ಸತ್ಯವಾದ 'ಅಂಗದ'. ಅಂತಹವರನ್ನು ಮಾಯೆಯು ಅಲುಗಾಡಿಸಲು ಸಾಧ್ಯವಿಲ್ಲ. ಅವರ ನಿಶ್ಚಯದ ಹೆಜ್ಜೆಯು ಅಚಲವಾಗಿರುತ್ತದೆ ಮತ್ತು ಅವಸ್ಥೆಯು ಅಡೋಲವಾಗಿರುತ್ತದೆ. ಆದ್ದರಿಂದ ಅಡೋಲರಾಗಿರುವುದಕ್ಕೆ ಒಂದು ಯುಕ್ತಿಯೆಂದರೆ ನಾವು ನಮ್ಮ ಅಂಗಾಂಗಗಳನ್ನೂ ಅರ್ಥಾತ್ ನಮ್ಮ ಸರ್ವ ಕರ್ಮೇಂದ್ರಿಯಗಳನ್ನೂ ಪರಮಪಿತ ಪರಮಾತ್ಮನಿಗೆ ಅರ್ಪಿಸಿ, ಅಂಗದನಂತೆ ರಾಮನ ದೂತನಾಗಿ ಅರ್ಥಾತ್ ಪರಮಪಿತ ಪರಮಾತ್ಮನ ಸಂದೇಶವನ್ನು ಇತರರಿಗೆ ಕೊಡಲು ನಿಮಿತ್ತರಾದರೆ ನಿಶ್ಚಯವಾಗಿ ಮಾಯೆಯು ನಮ್ಮ ಕಾಲುಗಳನ್ನು ಅಲುಗಾಡಿಸಲು ಸಾಧ್ಯವಿಲ್ಲ ಮತ್ತು ನಮ್ಮ ಅವಸ್ಥೆಯು ಅಡೋಲ (ಸ್ಥಿರ) ಹಾಗೂ ಏಕರಸವಾಗಿರುತ್ತದೆ.

ಇನ್ನೂ ಹೇಳುವುದಾದರೆ ಅಂಗಡಿಕಾರರು ಪ್ರದರ್ಶನಕ್ಕೆ ವಸ್ತುಗಳನ್ನು ಸುಂದರವಾಗಿ ಅಳವಡಿಸುತ್ತಾರೆ. ಇದೇ ಪ್ರಕಾರವಾಗಿ ಶಿವತಂದೆಯವರು ಸ್ಥಾಪಿಸಿರುವ ಈಶ್ವರೀಯ ಜ್ಞಾನಯಜ್ಞ ಅಥವಾ ಜ್ಞಾನ ಸೇವಾ ಕೇಂದ್ರಗಳಲ್ಲಿ ನಾವು ಚೈತನ್ಯ ದರ್ಶನೀಯ ವಸ್ತುಗಳೆಂದು ತಿಳಿಯಬೇಕು. ಇವುಗಳನ್ನು ನೋಡಿ ಇತರ ವ್ಯಕ್ತಿಗಳು ಈಶ್ವರನ ಜ್ಞಾನವನ್ನು ಪಡೆಯುವ ಸಾಹಸಮಾಡುವರು. ನಮ್ಮ ಜೀವನವನ್ನು ಆದರ್ಶವನ್ನಾಗಿ ಮಾಡಿಕೊಂಡು ದರ್ಶನೀಯ ಯೋಗ್ಯರನ್ನಾಗಿ ಮಾಡಿಕೊಳ್ಳುವ ಗುರುತರ ಜವಾಬ್ದಾರಿ ನಮ್ಮ ಮೇಲಿದೆ. ಈ ಪ್ರಕಾರವಾಗಿ ಇವೆಲ್ಲಾ ಯುಕ್ತಿಗಳನ್ನೂ ಉಪಯೋಗಿಸಿದ್ದೇ ಆದರೆ, ಅವಗುಣಗಳನ್ನೂ ಬಿಟ್ಟು ದಿವ್ಯಗುಣಗಳನ್ನು ಧಾರಣೆ ಮಾಡುವ ದೃಷ್ಟಿಕೋಣವನ್ನಿಟ್ಟುಕೊಂಡಿದ್ದೇ ಆದರೆ ನಿಶ್ಚಯವಾಗಿ ನಮ್ಮ ಜೀವನದಲ್ಲಿ ಶ್ರೇಷ್ಠತೆ, ಅಡೋಲ ಮತ್ತು ಏಕರಸ ಅವಸ್ಥೆಯು ಬರುವುದು.

**ಜಿಜ್ಞಾಸು**—ಇದೇನೋ ನಿಶ್ಚಿತವಾದುದು. ಸಹೋದರಿಯವರೇ, ನಿಜವಾಗಿಯೂ ಈ ದಿವ್ಯ ಗುಣದ ಧಾರಣೆಯ ಮಾತುಗಳನ್ನು ಕೇಳಿ ನಾನು ಧನ್ಯನಾದೆನು. ಈ ರೀತಿ ಮನುಷ್ಯನು ಗುಣ-ಗ್ರಾಹಕನಾಗಿ ಜೀವಿಸುವುದರಲ್ಲಿಯೇ ಅವನ ಕಲ್ಯಾಣವಿದೆ.

—ಓಂ ಶಾಂತಿ—

ಸಂಸಾರದಲ್ಲಿ ಬಹಳ ಜನರು ತಮ್ಮ ಛಲ, ಕಪಟ, ದಂಭ ಹಾಗೂ ಅನ್ಯ ದುರ್ನಡತೆಗಳ ಕಾರಣದಿಂದ ದುಃಖ ಹಾಗೂ ಅಶಾಂತಿ ರೂಪದ ಅಗ್ನಿಯಲ್ಲಿ ಮಾನಸಿಕವಾಗಿ ಬೇಯುತ್ತಿರುತ್ತಾರೆ ಯಾದರೂ ಅವರು ಈ ದುರಭ್ಯಾಸಗಳನ್ನು ಬಿಡುವುದೇ ಇಲ್ಲ. ಅಂತಹ ಸ್ವಭಾವವುಳ್ಳವರನ್ನು ಪಶು ಸಮಾನರೆನ್ನಲಾಗಿದೆ. ಪಾಶ ದಿಂದ ಬಂಧಿತವಾಗಿರುವುದೇ ಪಶು. ಈ ಜನರು ತಮ್ಮ ದುರ್ನ_ ಡತೆಗಳ ಪಾಶಗಳಿಂದ ಬಂಧಿತರಾಗಿರುವರು.

# ೮. ಗುಣಗ್ರಹಣ, ಸ್ನೇಹ ಮತ್ತು ದಯೆ.

**ಬ್ರಹ್ಮಾಕುಮಾರಿ—** ನಾನು ಕಳೆದ ಏಳು ದಿನಗಳಲ್ಲಿ ಕೆಲವಾರು ದಿವ್ಯ ಗುಣಗಳನ್ನು ಧಾರಣೆ-ಮಾಡುವುದರ ಆವಶ್ಯಕತೆ, ಆಯಾಯ ದಿವ್ಯಗುಣಗಳನ್ನು ಧಾರಣೆಮಾಡುವವರ ಲಕ್ಷಣ ಮತ್ತು ಆ ಗುಣಗಳನ್ನು ಧಾರಣೆಮಾಡಲು ಯುಕ್ತಿಗಳ ಬಗ್ಗೆ ಪ್ರಕಾಶ ಬೀರಿದ್ದೇನು. ಅವೆಲ್ಲವೂ ನಾವುಗಳು ಗುಣಮೂರ್ತಿ ಅಥವಾ ಮನುಷ್ಯರಿಂದ ದೇವತೆಯಾಗಲು ಪರಮಾತ್ಮ ಶಿವನೇ ನಮಗೆ ಕೊಟ್ಟ ಅಮೂಲ್ಯ ಜ್ಞಾನ ರತ್ನಗಳು. ಹಾಗೆಯೇ ನಮ್ಮ ವ್ಯವಹಾರಿಕ ಜೀವನದಲ್ಲಿ ಧಾರಣೆಮಾಡಬೇಕಾದ ಇನ್ನೂ ಅನೇಕ ದೈವೀಗುಣಗಳಿವೆ. ಆದರೆ ಸರ್ವ ದೈವೀಗುಣಗಳನ್ನೂ ಧಾರಣೆಮಾಡಲು ಮತ್ತು ಎಲ್ಲಾ ಕೆಟ್ಟಗುಣಗಳನ್ನೂ ತ್ಯಾಜ್ಯಮಾಡಲು ಮನುಷ್ಯನಲ್ಲಿ ಒಂದು ಗುಣವು ಮುಖ್ಯವಾಗಿರಬೇಕಾದುದು ಆವಶ್ಯಕವಾಗಿದೆ. ಅದೇ '**ಗುಣಗ್ರಹಣ.**' ಎಲ್ಲಾ ದೈವೀಗುಣಗಳನ್ನೂ ಧಾರಣೆಮಾಡಲು ಈ 'ಗುಣಗ್ರಹಣ' ಗುಣವು ಮನಸ್ಸೆಂಬ ಧರಣಿಯನ್ನು ಸಿದ್ಧಗೊಳಿಸುತ್ತದೆ. ಧರಣಿಯನ್ನು ಹದಗೊಳಿಸದೆ ಎಷ್ಟೇ ಉತ್ತಮ ಬೀಜವನ್ನು ಬಿತ್ತಿದರೂ, ಎಷ್ಟೇ ನೀರನ್ನು ಹಾಯಿಸಿದರೂ ಫಲಬರಲಾರದು. ಅಂತೆಯೇ ಗುಣಗ್ರಹಣವೆಂಬ ಗುಣವನ್ನು ಧಾರಣೆಮಾಡದಿದ್ದರೆ ಒಳ್ಳೆಯ ಗುಣಗಳನ್ನು ಬಿತ್ತಿ ಪರಿಶ್ರಮ ಸಫಲವಾಗುವಂತಹ ಧರಣಿಯು ಸಿದ್ಧಗೊಳ್ಳುವುದಿಲ್ಲ. ಎಲ್ಲಿಯವರೆಗೆ ಮನುಷ್ಯನಲ್ಲಿ ಇತರರ ಗುಣಗಳನ್ನು ನೋಡುವ ಹಾಗೂ ಅವರ ಅವಗುಣಗಳನ್ನು ಚಿತ್ತದಲ್ಲಿಡದಿರುವ ಗುಣವು ಬರುವುದಿಲ್ಲವೋ ಅಲ್ಲಿಯವರೆಗೆ ಮನುಷ್ಯನು ಗುಣಗಳ ಈ ಇಡೀ ಚರ್ಚೆಯನ್ನೆಲ್ಲಾ ಕೇಳುತ್ತಿದ್ದರೂ ಅವುಗಳ ಧಾರಣೆಯಿಂದ ವಂಚಿತನಾಗುತ್ತಾನೆ. ಆದ್ದರಿಂದ ''ಗುಣಗಳು ಎಲ್ಲಿಯೇ ಇರಲಿ ಯಾರಲ್ಲಿಯೇ ಇರಲಿ ಅವುಗಳನ್ನು ತಾನು ಪಡೆಯಬೇಕು ಮತ್ತು ಅವಗುಣವೆಂಬ ಕೊಳಕನ್ನು ತ್ಯಜಿಸಬೇಕು'' ಎಂಬ ದೃಢಸಂಕಲ್ಪವು ಪ್ರತಿಯೊಬ್ಬ ಪುರುಷಾರ್ಥಿಯಲ್ಲಿಯೂ ಮೊದಲು ಬರಬೇಕು.

**ಜಿಜ್ಞಾಸು —** ಸಹೋದರಿಯವರೇ, ನಾವು ಇತರರ ಅವಗುಣಗಳನ್ನು ನೋಡುವಷ್ಟು ಬೇಗ ಗುಣಗಳನ್ನು ನೋಡಲಾರೆವು. ಇದಕ್ಕೇನು ಕಾರಣ ?

**ಬ್ರಹ್ಮಾಕುಮಾರಿ—**ಲಕ್ಷ್ಯದ ವಿಸ್ಮೃತಿ ಮತ್ತು ತನ್ನ ಜೀವನವನ್ನು ಸುಧಾರಿಸಿಕೊಳ್ಳುವುದರ ಬಗ್ಗೆ ಉದಾಸೀನ ಭಾವನೆಯೇ ಇತರರ ಅವಗುಣಗಳನ್ನು ನೋಡುವುದಕ್ಕೆ ಮತ್ತು ಅವುಗಳ ಬಗ್ಗೆ ವಿಚಾರ ನಡೆಯುವುದಕ್ಕೆ ಕಾರಣ. ಅಲ್ಲದೆ ಮನುಷ್ಯನಿಗೆ ಯಾರ ಮೇಲೆ ಈರ್ಷೆ ಅಥವಾ ದ್ವೇಷವಿರುತ್ತದೆಯೋ ಆ ವ್ಯಕ್ತಿಯಲ್ಲೇ ಅಧಿಕವಾಗಿ ಅವಗುಣವನ್ನು ಕಾಣುತ್ತಿರುತ್ತಾನೆ. ಯಾರೊಡನೆ ಅವನಿಗೆ ಸ್ನೇಹವಿದೆಯೋ ಅವರಲ್ಲಿ ಅವಗುಣಗಳು ಕಂಡರೂ ಅವನ ಚಿತ್ತದಲ್ಲಿ ಅಧಿಕ ಸಮಯ ನಿಲ್ಲುವುದಿಲ್ಲ. ಅವನ್ನು ಕಂಡಾಗ ಅವನ ಮನದಲ್ಲಿ ತನ್ನ ಸ್ನೇಹಿತನ ಬಗ್ಗೆ ಸಹಾನುಭೂತಿಯ ಭಾವನೆ, ಶುಭ ಚಿಂತನೆ ಇವುಗಳು ಏಳುತ್ತವೆ. ಯಾರ ಮೇಲೆ ಮನದಲ್ಲಿ ಈರ್ಷೆ-ದ್ವೇಷವಿರುವುದೋ ಅವರ ಅವಗುಣದಿಂದ ಮನುಷ್ಯನು ಸಿಡುಗುಟ್ಟುವನು ಮತ್ತ ಕ್ರೋಧದಿಂದ ಜ್ವಲಿಸುವನು. ಆ ವ್ಯಕ್ತಿಗಳನ್ನು ನಿಂದಿಸಲೂ ತೊಡಗುತ್ತಾನೆ. ಅಲ್ಲದೆ ಅವರ ಅವಗುಣಗಳ ಜೊತೆಗೆ ತಾನು ಇನ್ನಷ್ಟು ಹುಳಿ-ಕಾರವನ್ನು ಸೇರಿಸಿ ಜನರ ಮುಂದೆ ತೆಗಳುವನು. ಈ ಪ್ರಕಾರ ಆ ಮನುಷ್ಯನು ಕಾಗೆಯಂತೆ ದುರ್ಗಂಧವನ್ನು ನೋಡುತ್ತಾನೆ, ದುರ್ಗಂಧವನ್ನೇ ಆರಿಸುತ್ತಾನೆ ಮತ್ತು 'ಕಾ, ಕಾ' ಎನ್ನುತ್ತಾ ಇತರರನ್ನೂ ದುರ್ಗಂಧದ ಕಡೆಗೇ ಎಳೆಯುತ್ತಾನೆ ಮತ್ತು ಕರೆದು ಕೂಡಿಸಿ ಕಾಗೆಗಳ ಸಭೆ ಅಥವಾ ಪರಿಷತ್ತನ್ನೇ ನಡೆಸುತ್ತಾನೆ. ಆದ್ದರಿಂದಲೇ ನಿಂದಕ ಅಥವಾ ಅವಗುಣ ಗ್ರಾಹಕನಿಗೆ ಜ್ಞಾನದ ಭಾಷೆಯಲ್ಲಿ **'ಕಾಗೆ'** ಎಂದು ಕರೆಯಲಾಗಿದೆ ಮತ್ತು ಅದರ ತುಲನೆಯಲ್ಲಿ ಗುಣಗಳೆಂಬ ಮುತ್ತನ್ನು ಆರಿಸಿಕೊಳ್ಳುವವರಿಗೆ 'ಹಂಸ' ಎಂದೂ ಹಾಗೂ ಈಶ್ವರೀಯ ಜ್ಞಾನದ ದಿವ್ಯಗುಣಗಳ ಮಧುರ, ಸುಸ್ವರವುಳ್ಳ, ಇಂಪಾದ, ರಸಭರಿತವಾದ, ಸ್ವಾರಸ್ಯಕರವಾದ ಗೀತೆಯನ್ನು ಹಾಡಿ ಹರ್ಷಪಡಿಸುವ ಕರ್ತವ್ಯವನ್ನು ಮಾಡುವವರಿಗೆ 'ಜ್ಞಾನ-ಕೋಗಿಲೆ' (Divive Nightingale) ಎಂದೂ ಕರೆಯಲಾಗಿದೆ. ಈಗ ಪ್ರತಿಯೊಬ್ಬ ಮನುಷ್ಯನೂ ತಾನು 'ಕಾ,ಕಾ,ಕಾ' ಎನ್ನುತ್ತಾ ಎಲ್ಲರಿಗೂ ತಲೆ ನೋವು ತರುವಂತಹ ಕಾಗೆಯಾಗಬೇಕೇ ಅಥವಾ ಗುಣಗಳ ಮುತ್ತನ್ನೇ ಆರಿಸುವ ಹಂಸ ಹಾಗೂ ಜ್ಞಾನ-ಗೀತೆಯನ್ನು ಹಾಡಿ ಇತರರನ್ನು ಉಲ್ಲಾಸಪಡಿಸಿ, ಸಂತೋಷ ಪಡಿಸುವ ಕೋಗಿಲೆಯಾಗಬೇಕೇ ಎಂಬುದು ತನ್ನನ್ನೇ ಅವಲಂಬಿಸಿರುತ್ತದೆ.

**ಜಿಜ್ಞಾಸು**—ಸಹೋದರಿಯವರೇ, ಲಕ್ಷ್ಯದ ವಿಸ್ಮೃತಿಯೇ ಅವಗುಣಗಳ ಮೇಲೆ ಗಮನ ಹೋಗಲು ಮುಖ್ಯ ಕಾರಣವಾಗಿದೆ; ಈರ್ಷ್ಯೆ-ದ್ವೇಷದ ಕಾರಣದಿಂದಲೂ ಮನುಷ್ಯನ ಗಮನವು ಅವಗುಣಗಳ ಮೇಲೆ ಹೋಗುತ್ತದೆ ಮತ್ತು ಸ್ನೇಹದಿಂದ ಮನುಷ್ಯನು ಗುಣಗಳ ಮೇಲೆ ಗಮನ ಹರಿಸುತ್ತಾನೆ ಎಂಬುದನ್ನು ಹೇಳಿದಿರಿ. ಆದರೆ ಈ ಈರ್ಷ್ಯೆ-ದ್ವೇಷ ಮತ್ತು ಲಕ್ಷ್ಯದ ವಿಸ್ಮೃತಿ ಏಕೆ ಆಗುತ್ತದೆ ಮತ್ತು ಅವುಗಳ ನಿವಾರಣೆ ಹೇಗೆ ಎಂಬುದನ್ನು ಸ್ಪಷ್ಟಪಡಿಸಿರಿ.

**ಬ್ರಹ್ಮಾಕುಮಾರಿ**—ದೇಹಾಭಿಮಾನದ ಕಾರಣದಿಂದ ಲಕ್ಷ್ಯದ ವಿಸ್ಮೃತಿ ಹಾಗೂ ಈರ್ಷ್ಯೆ-ದ್ವೇಷವು ಉತ್ಪನ್ನವಾಗುತ್ತದೆ. ಇವೆಲ್ಲಕ್ಕೂ ಮುಖ್ಯಕಾರಣವೆಂದರೆ ಮನುಷ್ಯನ ಕೆಲವು ತೃಷ್ಣೆಗಳು (ಅವು ಮನಸ್ಸಿನ ಇಚ್ಛೆಗಳೇ ಆಗಿರಬಹುದು ಅಥವಾ ಯಾವುದಾದರೂ ವಸ್ತುವಿನ ಪ್ರಾಪ್ತಿಯ ಇಚ್ಛೆಯಾಗಿರಬಹುದು) ಪೂರ್ತಿಯಾಗದೆ ಇರುವುದು. ಒಬ್ಬ ಮನುಷ್ಯನಿಗೆ ಇನ್ನೊಬ್ಬ ವ್ಯಕ್ತಿಯಿಂದ ಯಾವುದೋ ಆಸೆಯು ಪೂರ್ಣವಾಗಬೇಕಾಗಿದ್ದು ಅದು ಪೂರ್ತಿಯಾಗದೆ ಇದ್ದರೆ ಅವನು ಆ ವ್ಯಕ್ತಿಯ ಮೇಲೆ ಸಿಟ್ಟಾಗುತ್ತಾನೆ ಮತ್ತು ಈ ಸಿಟ್ಟೇ ಕಡೆಗೆ ಈರ್ಷ್ಯೆ, ದ್ವೇಷ, ಅವಗುಣ ದರ್ಶನ, ನಿಂದೆ, ವಿರೋಧ ಹಾಗೂ ಯಾವುದಾದರೂ ರೀತಿಯಲ್ಲಿ ಆ ವ್ಯಕ್ತಿಯನ್ನು ಎಲ್ಲ ದೃಷ್ಟಿಯಿಂದ ದೂರಮಾಡಿ ಕೆಳಮಟ್ಟದವನೆಂದು ತೋರಿಸಬೇಕೆನ್ನಿಸುವ ರೂಪವನ್ನು ಧಾರಣೆಮಾಡುತ್ತದೆ. ಇತರರ ಅವಗುಣವನ್ನು ಮನನ ಮಾಡುವುದರಿಂದ, ದುರ್ಗುಣ ಚಿಂತೆಮಾಡುವುದರಿಂದ, ದೋಷ ವರ್ಣನೆ ಮಾಡುವುದರಿಂದ ತಾನು ಪಾಪವನ್ನು ಜಮಾ ಮಾಡಿಕೊಳ್ಳುತ್ತಿದ್ದೇನೆ, ತನ್ನ ಭಾಗ್ಯವನ್ನೇ ಕಳೆದುಕೊಳ್ಳುತ್ತಿದ್ದೇನೆ ಎಂಬುದನ್ನು ಪೂರ್ಣವಾಗಿ ಮರೆತು ತನ್ನ ದ್ವೇಷ-ಪಾತ್ರನನ್ನು ಗೇಲಿಗೆಬ್ಬಿಸಿ ಅವನ ಗುಟ್ಟನ್ನು ರಟ್ಟುಮಾಡುತ್ತಿರುವೆನೆಂದು ತಿಳಿಯುವನು.

ಈ ಪ್ರಕಾರವಾಗಿ ಅವನು ಯಾರನ್ನು ನಿಂದಿಸುವನೋ ನಿಂದಿಸಿಕೊಂಡವನಿಂದ ದೂರವಾಗುವುದಲ್ಲದೆ ಕ್ರಮೇಣ ಪ್ರಭುವಿನ ಚಿತ್ತದಿಂದಲೂ ದೂರವಾಗುವನು. ಏಕೆಂದರೆ ಪ್ರಭುವಿನ ಮನದಲ್ಲಿ ನಿಂದಕರಿಗೆ ಸ್ಥಳವಿಲ್ಲ. "ಹೇ ಪ್ರಭುವೇ ನನ್ನ ಅವಗುಣವನ್ನು ನಿನ್ನ ಚಿತ್ತದಲ್ಲಿಡಬೇಡ" ಎಂದು ಜನರು ಪ್ರಭುವನ್ನು ಪ್ರಾರ್ಥಿಸಿದರೂ ಈ ನಿಂದಕರು ಅವಗುಣಗ್ರಾಹಕರಾಗಿಯೇ ಉಳಿದಿರುತ್ತಾರೆ.

ಇದಕ್ಕೆ ವಿಪರೀತವಾಗಿ ಯಾವ ಮನುಷ್ಯನಿಗೆ ತನ್ನ ಲಕ್ಷ್ಯದ ಸ್ಮೃತಿ ಯಿರುತ್ತದೆಯೋ ಅವನು ಎಲ್ಲರನ್ನೂ ಸ್ನೇಹ ದೃಷ್ಟಿಯಿಂದ ನೋಡುತ್ತಾನೆ. ಒಂದು ವೇಳೆ ಅವಗುಣಗಳನ್ನು ಕಂಡರೂ ಸಹ ಅವನು ಸಹನ ಶೀಲತೆಯನ್ನು ಬಿಟ್ಟು ದಿವ್ಯ ಮರ್ಯಾದೆಯಿಂದ ಹೊರಗೆ ಹೋಗುವುದಿಲ್ಲ. ಬದಲಾಗಿ ಕರುಣಾ ಶೀಲನಾಗಿ ಇತರರ ಅವಗುಣಗಳನ್ನು ತನ್ನ ಚಿತ್ತದಲ್ಲಿಡುವುದಿಲ್ಲ ಮತ್ತು ಇತರರ ಅವಗುಣಗಳನ್ನು ತೆಗೆದು ಅವರಲ್ಲಿ ದಿವ್ಯಗುಣಗಳನ್ನು ತುಂಬಲು ಯತ್ನಿಸುತ್ತಾನೆ. ಲಕ್ಷ್ಯ-ಸ್ಥಿತನಾದ ಮನುಷ್ಯನಿಗೆ ಯಾವ ಇಚ್ಛೆಯೂ ಇರು ವುದಿಲ್ಲ. ಒಂದು ವೇಳೆ ಯಾವ ಇಚ್ಛೆಯಾದರೂ ಉಂಟಾದಲ್ಲಿ ಯಾವ ವ್ಯಕ್ತಿ ಯೂ ಅವನಿಗೆ ಇಚ್ಛೆ ಪೂರ್ಣಮಾಡಿಕೊಡದೆ ಕೆಟ್ಟದ್ದನ್ನೇ ಮಾಡಿದರೂ ಅವನು ಆ ಅಪಕಾರಿಗಳಿಗೂ ಉಪಕಾರವನ್ನೇ ಮಾಡುವ ಭಾವನೆಯನ್ನು ಸದಾ ತನ್ನಲ್ಲಿ ತುಂಬಿಕೊಂಡಿರುತ್ತಾನೆ.

## ಅವಗುಣಗ್ರಾಹಕರ ಸಂಗವು ಬಹಳ ಹಾನಿಕಾರಕ

ಅವಗುಣಗಳನ್ನು ಗ್ರಹಣಮಾಡುವ ಮನುಷ್ಯನು ತನ್ನ ಮನಸ್ಸನ್ನೂ ಕೆಡಿಸಿಕೊಳ್ಳುವುದಲ್ಲದೆ ಅವನು ಎಲ್ಲೆಲ್ಲಿ ಹೋಗುವನೋ ಅಲ್ಲೆಲ್ಲಾ ದುರ್ಗಂಧ ವನ್ನೇ ಹರಡುವನು, ಅನೇಕರನ್ನು ತಮ್ಮೊಳಗೆ ಒಬ್ಬರಿಗೊಬ್ಬರು ವಿರೋಧ ತಾಳು ವಂತೆ, ವೈಮನಸ್ಯ ಬರುವಂತೆ, ತಿರಸ್ಕಾರ ಭಾವನೆ ಮೂಡುವಂತೆ ಮಾಡುವನು. ಅಂತಹ ವ್ಯಕ್ತಿಯ ಸಂಗವು ಬಹಳ ಕೆಡುಕಾದುದು. ಹೇಗೆ ನಿಂದಕನು ಪ್ರಭುವಿಗೆ ಪ್ರಿಯನಾಗಿರಲಾರನೋ ಹಾಗೆಯೇ ಅವನು ತನ್ನ ಕುಸಂಗದಿಂದ ಇತರರನ್ನೂ ಕೆಡಿಸಿ ಪ್ರಭುವಿನಿಂದ ವಿಮುಖರನ್ನಾಗಿ ಮಾಡುವನು ಮತ್ತು ಮಾಯೆಯ ಅತಿ ಪ್ರಿಯ ಅನುಯಾಯಿಗಳನ್ನಾಗಿಯೂ ಮಾಡುವನು.

ಆದ್ದರಿಂದ ದಿವ್ಯಗುಣಗಳನ್ನು ಧಾರಣೆ ಮಾಡಲು ಎಲ್ಲಕ್ಕಿಂತ ಮೊದಲು ಗುಣಗ್ರಾಹಕತಾ ಗುಣವು ಆವಶ್ಯವಾಗಿರಬೇಕು. ಯಾವ ಮನುಷ್ಯನು ಈಶ್ವರ ನೊಡನೆ ಮತ್ತು ಈಶ್ವರನಿಗೆ ಸಮರ್ಪಿತರಾದ ವ್ಯಕ್ತಿಗಳೊಡನೆ ಮತ್ತು ಸಂಸಾರದ ಎಲ್ಲ ಜನರೊಡನೆಯೂ ಆತ್ಮೀಯ ಹಾಗೂ ನಿಸ್ವಾರ್ಥ ಸ್ನೇಹವನ್ನಿಟ್ಟಿರುವನೋ ಅವನು ಅತಿ ತೀವ್ರ ಗತಿಯಲ್ಲಿ ಗುಣಗಳನ್ನು ಧಾರಣೆ ಮಾಡುತ್ತಾ ಪ್ರಭುವಿಗೆ

ಪ್ರಿಯನಾಗುವನು, ದೈವೀಪರಿವಾರಕ್ಕೂ ಪ್ರಿಯನಾಗುವನು, ಲೋಕಪ್ರಿಯ
ನಾಗುವನು. ಮತ್ತು ತನ್ನ ಮನಕ್ಕೂ ಪ್ರಿಯನಾಗುವನು. ಒಂದು ವೇಳೆ
ಸ್ನೇಹವಿಲ್ಲದಿದ್ದಲ್ಲಿ ದಿವ್ಯಗುಣವಿಲ್ಲ, ದಿವ್ಯಗುಣವಿಲ್ಲದಿದ್ದಲ್ಲಿ ದೇವತೆಯೂ ಆಗ
ಲಾರನು ಮತ್ತು ಲೋಕಪ್ರಿಯನೂ ಆಗಲಾರನು.

ಈಗ ಕಲಿಯುಗದ ಅಂತ್ಯವಾಗಿದ್ದು ಎಲ್ಲ ಮನುಷ್ಯರಲ್ಲಿಯೂ ಅವಗುಣ
ಗಳೇ ತುಂಬಿಕೊಂಡಿವೆ. ಆದ್ದರಿಂದಲೇ ಜನರು ನಿತ್ಯವೂ ಭಗವಂತನನ್ನು "ಹೇ
ಪ್ರಭು ನಾವು ನೀಚ, ನಮ್ಮ ಅವಗುಣಗಳನ್ನು ಕಳೆ" ಎಂಬುದಾಗಿ ಪ್ರಾರ್ಥಿಸು
ವರು. ಈಗ ಇಡೀ ಸೃಷ್ಟಿಯಲ್ಲಿ ಅವಗುಣ ಅಥವಾ ತಮೋಗುಣ ಪ್ರಧಾನ
ವಾಗಿದೆ. ಎಲ್ಲರೂ ಆಸುರೀ ಲಕ್ಷಣಗಳಿಂದ ಕೂಡಿದ್ದಾರೆ. ಆದ್ದರಿಂದಲೇ ಕರು–
ಣಾಸಾಗರ ಪರಮಾತ್ಮನು ಅವತರಿಸಬೇಕಾಯಿತು. ಯಾರು ದಿವ್ಯಗುಣಗಳಿಲ್ಲದೆ
ಕ್ಷೀಣಿಸಿರುವರೋ ಅವುಗಳಿಂದ ವಿಸ್ಮೃತರಾಗಿರುವರೋ ಅವರನ್ನು ಜಾಗೃತ
ಗೊಳಿಸುವುದು, ಆ ದಿವ್ಯಗುಣಗಳನ್ನು ಪುನರಭಿವೃದ್ಧಿಗೊಳಿಸಿ ಅವುಗಳ ವಿಕಾಸ
ಕ್ಕಾಗಿ ಜ್ಞಾನವನ್ನು ಕೊಡುವುದು ಪರಮಾತ್ಮನ ಕಾರ್ಯವಾಗಿದೆ. ಅವಗುಣ
ದೃಷ್ಟಿಯನ್ನು ಬಿಡಲು ನಾವು ಈ ಮಾತನ್ನು ಸದಾ ಗಮನದಲ್ಲಿಟ್ಟಿರಬೇಕು—
"ಎಲ್ಲಾ ಮನುಷ್ಯರಲ್ಲಿಯೂ ಅವಗುಣಗಳೇ ತುಂಬಿವೆ, ನಮ್ಮಲ್ಲಿಯೇ ಬೇಕಾದಷ್ಟು
ಅವಗುಣಗಳಿವೆಯಾದರೂ ಪ್ರತಿಯೊಬ್ಬರಲ್ಲಿಯೂ ಒಂದಲ್ಲ ಒಂದು. ಹೆಚ್ಚಿಲ್ಲ
ದಿದ್ದರೆ ಸ್ವಲ್ಪವಾದರೂ ಒಳ್ಳೆಯ ಗುಣಗಳು ಇದ್ದೇ ಇವೆ. ನಾನೀಗ ಅವರ
ಅವಗುಣಗಳನ್ನು ನೋಡದೆ, ಕೇಳದೆ, ಅವುಗಳ ವರ್ಣನೆಯನ್ನು ಮಾಡದೆ.
ಅವುಗಳನ್ನು ಮನಸ್ಸಿನಲ್ಲಿಡದೆ, ಒಳ್ಳೆಯದನ್ನೇ ನೋಡಿ ಕೇಳಿ, ವರ್ಣಿಸಿ.
ಧಾರಣೆಮಾಡಬೇಕು. ಪತಿತಪಾವನ ಪರಮಾತ್ಮ ನನಗೆ ಕೆಟ್ಟದ್ದನ್ನು ನೋಡ
ಬೇಡ, ಕೇಳಬೇಡ. ಆಡಬೇಡ, ಯೋಚಿಸಬೇಡ ಮತ್ತು ಕೆಟ್ಟ ಕರ್ಮವನ್ನು
ಮಾಡಲೂಬೇಡ. ಕೆಟ್ಟದ್ದನ್ನು ನೋಡಿ ಅದನ್ನೇ ಮಾಡುವುದರಿಂದ ಮನುಷ್ಯನು
ಕೆಟ್ಟವನೇ ಆಗುತ್ತಾನೆ. ಆದ್ದರಿಂದ ಪ್ರತಿಯೊಬ್ಬರಲ್ಲಿಯೂ ಇರುವ ಅಲ್ಪಸ್ವಲ್ಪ
ಸದ್ಗುಣಗಳನ್ನೇ ನಾನೀಗ ನೋಡುತ್ತಾ ಅವುಗಳನ್ನು ಧಾರಣೆಮಾಡಬೇಕು.
ಹಾಗೆ ಧಾರಣೆಮಾಡಿದಾಗಲೇ ನನ್ನಲ್ಲಿ ಗುಣ–ಗ್ರಹಣ ದೃಷ್ಟಿಯು ಬರುತ್ತದೆ".

ನಾವೆಲ್ಲಾ ಆತ್ಮಗಳೂ ಒಂದೇ ಕುಟುಂಬದವರಾಗಿದ್ದೇವೆ. ಆತ್ಮದ

ಸಂಬಂಧದಿಂದ ನಾವೆಲ್ಲರೂ ಸಹೋದರ-ಸಹೋದರರಾಗಿದ್ದೇವೆ—ಈ ದೃಷ್ಟಿ ಕೋಣದಿಂದ ಮನುಷ್ಯನಲ್ಲಿ ಇತರರೂ ತನ್ನವರೆಂಬ ಭಾವವು ಬರುತ್ತದೆ, ಅವನ ಸ್ನೇಹವು ಯಾವ ಈ ವಿಶ್ವ ಕುಟುಂಬದ ಪೋಷಕನಾಗಿರುವನೋ ಆ ಪರಮಾತ್ಮನಲ್ಲಿ ಬೆಳೆಯುತ್ತದೆ. ಮತ್ತು ಎಲ್ಲರ ಬಗ್ಗೆ ಅವನ ಮನದಲ್ಲಿ ಶುಭ ಚಿಂತೆ, ಭ್ರಾತೃಭಾವ, ಸ್ನೇಹ ಮತ್ತು ಸಹಾನುಭೂತಿಯು ಉತ್ಪತ್ತಿಯಾಗುವುದು. ಈಗ ನಾವೆಲ್ಲರೂ ಒಬ್ಬ ಪರಮಾತ್ಮನ ಸಂತಾನವಾಗಿರುವಂತೆ ಸತ್ಯ ಮತ್ತು ತ್ರೇತಾಯುಗದಲ್ಲಿಯೂ ನಮ್ಮಲ್ಲಿ ಒಂದು ಕುಟುಂಬದ ಸ್ವಜನರಂತೆ ಸಂಬಂಧ ಮತ್ತು ಪ್ರೀತಿಗಳು ಬೆಳೆದಿದ್ದವು. ಅನಂತರ ಮಾಯೆಯು ನಮ್ಮಲ್ಲಿ ಭೇದ-ಭಾವ, ಈರ್ಷ್ಯೆ-ದ್ವೇಷಗಳನ್ನು ಹುಟ್ಟಿಸಿತು. ಈಗ ಸ್ವಯಂ ಪರಮಾತ್ಮನು—"ನೀವೆಲ್ಲರೂ ಆತ್ಮಗಳು, ಒಬ್ಬರಿಗೊಬ್ಬರು ಸಹೋದರ-ಸಹೋದರಿಯರಾಗಬೇಕು. ಆದ್ದರಿಂದ ನೀವುಗಳು ಪರಸ್ಪರ ಪ್ರೇಮದಿಂದ ಕ್ಷೀರಸಾಗರದಂತೆ ವರ್ತಿಸಬೇಕು" ಎಂದು ಹೇಳಿರುವನು. ಈ ಮಾತನ್ನು ನೆನಪಿನಲ್ಲಿಟ್ಟುಕೊಂಡರೆ ನಮ್ಮ ಸ್ನೇಹವು ಪರಮಪಿತ ಪರಮಾತ್ಮನೊಡನೆ ಹಾಗೂ ಎಲ್ಲಾ ಆತ್ಮರೊಡನೆಯೂ ಬೆಳೆಯುತ್ತದೆ. ಮನುಷ್ಯನಿಗೆ ಯಾರಿಂದ ದಿವ್ಯಗುಣಗಳು ಪ್ರಾಪ್ತಿಯಾಗುತ್ತವೆಯೋ ಮತ್ತು ಯಾರಲ್ಲಿ ಅವನು ದಿವ್ಯಗುಣವನ್ನು ನೋಡುವನೋ ಅವನಲ್ಲಿ ಸ್ನೇಹವು ತಾನಾಗಿಯೇ ಬೆಳೆಯುತ್ತದೆ. ಪರಮಾತ್ಮನಲ್ಲಿ ಎಷ್ಟು ಸ್ನೇಹವು ಬೆಳೆಯುತ್ತದೆಯೋ ಅಷ್ಟೇ ಅವನ ನೆನಪೂ ಬರುತ್ತದೆ ಮತ್ತು ಪರಮಾತ್ಮನ ನೆನಪು ಎಷ್ಟು ಬರುತ್ತದೆಯೋ ಅಷ್ಟೇ ನಮ್ಮಲ್ಲಿ ಪರಮಾತ್ಮನ ಬಗ್ಗೆ ಪ್ರೀತಿ ಪ್ರೇಮಗಳೂ ಹೆಚ್ಚುತ್ತವೆ. ಏಕೆಂದರೆ ಪರಮಾತ್ಮನು ಪ್ರೀತಿಯ ಸಾಗರ ಮತ್ತು ಕರುಣಾ ಹೃದಯ-ವಿಶಾಲ ಸಾಮ್ರಾಜ್ಯದ ಪ್ರಭು. ಎಲ್ಲರೂ ಅವನನ್ನು "ಹೇ ಪರಮಾತ್ಮ ನಮ್ಮ ಮೇಲೆ ಕರುಣೆ ತೋರು, ಹೇ ದಯಾಳು ಪ್ರಭು, ದಯಮಾಡು" ಎಂದು ಪ್ರಾರ್ಥನೆಮಾಡುತ್ತಾರೆ. ಪರಮಾತ್ಮನಲ್ಲಿ ನಮ್ಮ ಸ್ನೇಹವಿದ್ದರೆ ನಾವು ಪರಮಾತ್ಮನ ಮಾತನ್ನು ಒಪ್ಪಬೇಕಲ್ಲವೆ? ಯಾರೊಡನೆ ಸ್ನೇಹವಿರುತ್ತದೆಯೋ ಅವರ ಮಾತನ್ನು ಅವನು ಸ್ವೀಕರಿಸುತ್ತಾನೆ; ಅವರ ಗುಣಗಳನ್ನು ತನ್ನಲ್ಲಿ ಧಾರಣೆಮಾಡುತ್ತಾನೆ. ಇದೇ ಸ್ನೇಹದ ಪ್ರಮಾಣ. ಪರಮಾತ್ಮನು ದಯಾಸಾಗರ, ಪ್ರೀತಿಯ ಸಾಗರನಾದುದರಿಂದ ಪ್ರೀತಿ ದಯೆಗಳೆಂಬ ಗುಣಗಳನ್ನೂ ನಾವು ನಮ್ಮಲ್ಲಿ

ಧಾರಣೆಮಾಡಬೇಕಲ್ಲವೆ ? ಪರಮಪಿತ ಪರಮಾತ್ಮನು ಎಲ್ಲ ಆತ್ಮಗಳ ಅವಗುಣ ಗಳನ್ನು ತನ್ನ ಚಿತ್ತದಲ್ಲಿಟ್ಟುಕೊಳ್ಳದೆ, ಜ್ಞಾನ ಮತ್ತು ಗುಣಗಳ ದಾನ ಮಾಡುವ ದಯೆಯನ್ನು ತೋರುವಂತೆ ನಾವೂ ಸಹ ಇತರರ ಅವಗುಣಗಳ ಬಗ್ಗೆ ಕನಿಕರ ಪಡಬೇಕು ಅರ್ಥಾತ್ ಒಬ್ಬರಿಗೊಬ್ಬರು ಅವಗುಣಗಳ ವ್ಯವಹಾರವನ್ನು ನಡೆಸದೆ, ಪರಸ್ಪರ ದ್ವೇಷ ಮಾಡದೆ, ತಮ್ಮ ತಮ್ಮಲ್ಲಿ ಈಶ್ವರೀಯ ಸ್ಮೃತಿ ಮತ್ತು ಎಚ್ಚ-ರಿಕೆಯನ್ನು ಕೊಡುತ್ತಾ ಪ್ರತಿಯೊಬ್ಬರಿಗೂ ಸಹಯೋಗಿಗಳಾಗಿ, ಗುಣಮೂರ್ತಿ ಗಳಾಗಿರಬೇಕು. ಇತರರ ಅವಗುಣಗಳನ್ನು ನೋಡುವುದೆಂದರೆ ತನಗೆ ತಾನೇ ಮುಳ್ಳಿನಿಂದ ಚುಚ್ಚಿಕೊಂಡಂತೆ ಮತ್ತು ಇತರರ ಮುಂದೆ ಬೇರೆಯವರ ಅವಗುಣ ಗಳನ್ನು ವರ್ಣಿಸುವುದೆಂದರೆ ಅವರಿಗೂ ಮುಳ್ಳನ್ನು ಚುಚ್ಚಿ ಗಾಯಗೊಳಿಸಿ ಮನ ನೋಯಿಸಿದಂತೆ ಆಗುತ್ತದೆ ಅಥವಾ ಮಾಯಾ ಮೂರ್ಛಿತರನ್ನಾಗಿ ಮಾಡಿದಂತಾ ಗುತ್ತದೆ. ಈಗ ಪರಮಾತ್ಮನು ಕಲಿಯುಗವೆಂಬ ಮುಳ್ಳಿನ ಕಾಡನ್ನು ಸತ್ಯ ಯುಗವೆಂಬ ಹೂವಿನ ತೋಟವನ್ನಾಗಿ ಪರಿವರ್ತಿಸುವುದರಿಂದ ನಾವೂ ಸಹ ಇತರರಿಂದ ದಿವ್ಯಗುಣಗಳನ್ನು ಪಡೆದು ಹೂಗಳಾಗಬೇಕು ಮತ್ತು ಚುಚ್ಚುವ ಸ್ವಭಾವವನ್ನು ಬಿಟ್ಟು ಬಿಡಬೇಕು, ಇಲ್ಲದಿದ್ದಲ್ಲಿ ನಮಗೂ ಸಹ ಧರ್ಮ ರಾಜನ ಪುರಿಯಲ್ಲಿ ಮುಳ್ಳಿನೇಟು, ಕಪಾಳದೇಟುಗಳು ಬೀಳುತ್ತವೆ. ಅದರಿಂದ ಅನೇಕ ಪಟ್ಟು ದಂಡವನ್ನನುಭವಿಸುವ ಪುರುಷಾರ್ಥವು ಎಂತಹ ಪುರುಷಾರ್ಥ !

**ಜಿಜ್ಞಾಸು** — ಸಹೋದರಿಯವರೇ, ಕರುಣೆ ದಯೆ ಮತ್ತು ಸ್ನೇಹ ಈ ಗುಣಗಳು ನಿಸ್ಸಂದೇಹವಾಗಿ ಅತಿ ಮಹತ್ವದ ದಿವ್ಯಗುಣಗಳಾಗಿವೆ ಮತ್ತು ಬೇರೆ ಯವರ ಅವಗುಣವನ್ನು ನೋಡುವುದೂ ಸಹ ಅತಿ ಕೆಟ್ಟ ಅವಗುಣವಾಗಿದೆ. ಸಹೋದರಿಯವರೇ ಇತರರ ಅವಗುಣಗಳನ್ನು ನೋಡುವ ವೃತ್ತಿಯು ಯಾವ ಯಾವ ರೂಪವನ್ನು ಧಾರಣೆ ಮಾಡುತ್ತದೆ, ಅವಗುಣಗಳನ್ನು ಗ್ರಹಣಮಾಡು ವುದರಿಂದ ಏನೇನು ಹಾನಿಯಾಗುತ್ತದೆ ಮತ್ತು ಅವಗುಣಗಳನ್ನು ಗ್ರಹಣ ಮಾಡುವ ಮನುಷ್ಯನ ಚಿನ್ಹೆಗಳೇನೆಂಬುದನ್ನು ನನಗೆ ಇನ್ನೂ ಅಧಿಕವಾಗಿ ಸ್ಪಷ್ಟ ಪಡಿಸಿರಿ. ಇದರಿಂದ ನಾನೂ ಸಹ ದುಸ್ಸಂಗ ಮತ್ತು ದುರ್ಗುಣಗಳಿಂದ ದೂರವಿರುವಂತಾಗಲಿ.

**ಬ್ರಹ್ಮಾಕುಮಾರಿ** — ಅವಗುಣಗಳನ್ನು ನೋಡುವ ಅಥವಾ ದೋಷ

ದೃಷ್ಟಿಯುಳ್ಳ ಮನುಷ್ಯನ ಮನೋವೃತ್ತಿಯು ಅನೇಕ ರೂಪವನ್ನು ಧರಿಸುತ್ತದೆ. ಇತರರ ದೋಷ ಅಥವಾ ಅವಗುಣವನ್ನು ನೋಡಿ ಅವನ್ನು ತನ್ನಲ್ಲಿ ತುಂಬಿಕೊಂಡರೆ ಅವುಗಳು ಅವನನ್ನು ಮುಳ್ಳಿನಂತೆ ಚುಚ್ಚುತ್ತಿರುತ್ತವೆ. ಉದಾಹರಣೆಗೆ ಒಬ್ಬ ವ್ಯಕ್ತಿಯು ಸದಾ ಕಠೋರವಾದ ಮಾತುಗಳನ್ನೇ ಆಡುತ್ತಾನೆ. ಅಥವಾ ಯಾವುದೇ ಕಾರ್ಯಮಾಡಲು ಹಿಂಜರಿಯುತ್ತಾನೆ. ಅವನ ಈ ದುರ್ಗುಣವನ್ನು ಮನದಲ್ಲಿ ತುಂಬಿಕೊಂಡ ವ್ಯಕ್ತಿಗೆ ಆ ವ್ಯಕ್ತಿಯ ಕಠೋರ ಮಾತುಗಳು ಚುಚ್ಚುತ್ತವೆ. ಆ ವ್ಯಕ್ತಿಯ ದುಸ್ವಭಾವವನ್ನು ಪದೇ ಪದೇ ನೋಡುವುದರಿಂದ ಕಳವಳಗೊಳ್ಳುತ್ತಾನೆ. ಇದರಿಂದ ತಾನೂ ಅಶಾಂತನಾಗುವುದಲ್ಲದೆ ಆ ಸ್ವಭಾವದ ಯೋಚನೆ-ವಿಚಾರದಲ್ಲೇ ಮುಳುಗಿ ತನ್ನ ಸ್ಥೈರ್ಯವನ್ನೂ ಕಳೆದುಕೊಳ್ಳುತ್ತಾನೆ; ವ್ಯಾಕುಲತೆ ಹೆಚ್ಚಿ ಬುದ್ಧಿಮಾಂದ್ಯವಾಗುತ್ತದೆ.

## ಕಳವಳದ ಪರಿಹಾರ

ಶಿವತಂದೆಯವರು ಹೇಳುವಂತೆ ಈ ಪ್ರಕಾರದ ದೋಷ ದರ್ಶನವನ್ನೇ ಮಾಡುವವರಿಗೆ ಚಳಿಜ್ವರದ ಕಾಯಿಲೆಯಿಂದ ನರಳುವಂತಹ ಅನುಭವವಾಗುತ್ತದೆ, ನರನಾಡಿಗಳಲ್ಲಿ ನೋವಾಗುವಂತಾಗುತ್ತದೆ. ಮುಂಗೋಪ ಮೂಡಿ ಮುಖ ಕೆಂಪೇರುತ್ತದೆ. ಈ ಪ್ರಕಾರದ ಕಳವಳದಿಂದ ಮನುಷ್ಯನಿಗೆ ಸಂಕಲ್ಪ-ವಿಕಲ್ಪಗಳು ಮೂಡಿ, ಪುರುಷಾರ್ಥ ಹೀನನಾಗಿ ಹಿಂದೆ ಬೀಳುತ್ತಾನೆ. ಚಳಿಜ್ವರದ ಕಾಯಿಲೆಯಿಂದ ದೂರವಾಗಲು ನಾವು ಔಷಧೋಪಚಾರಗಳನ್ನು ಮಾಡಿಕೊಳ್ಳುವಂತೆ ಈ ಕಳವಳದ ಕಾಯಿಲೆಯಿಂದಲೂ ದೂರವಿರಬೇಕು. ಅಂದರೆ ಅವಗುಣದರ್ಶನ ಅಥವಾ ಅವಗುಣ ಗ್ರಹಣಮಾಡುವುದನ್ನು ಬಿಟ್ಟುಬಿಡಬೇಕಲ್ಲದೆ ಅವಗುಣ-ಗ್ರಾಹಕ ಹಾಗೂ ನಿಂದಕರ ಸಂಗವನ್ನೂ ಮಾಡಬಾರದು. ಹೀಗೆ ಇದ್ದಾಗ್ಯೂ ಸಹ ಕಳವಳದ ಮನೋವ್ಯಥೆಯೂ ಪ್ರಾರಂಭವಾದರೆ, ಆಗ ಪರಮಪಿತ ಪರಮಾತ್ಮನನ್ನು ನೆನೆದರೆ, ದೈವೀ ಪರಿವಾರದೊಡನೆ ಸೇರಿ, ಈಶ್ವರೀಯ ಚರಿತ್ರೆಯಲ್ಲಿ ಮಗ್ನರಾದರೆ ಅದು ದೂರವಾಗುತ್ತದೆ. ಅಲ್ಲದೆ ತನ್ನ ಮತ್ತು ಇತರರ ಅವಗುಣಗಳನ್ನು ವರ್ಜಿಸಲು ಏಕಮಾತ್ರ ಉಪಾಯವೆಂದರೆ-ತನ್ನಲ್ಲಿ ಮೊದಲು ದೈವೀಗುಣವನ್ನು ಧಾರಣೆಮಾಡುವುದು.

ನಿರ್ಬಲ ಪುರುಷಾರ್ಥಿಗಳನ್ನು ನೋಡಬೇಡಿರಿ. ಏಕೆಂದರೆ ಇವರು ನಿಮ್ಮ 'ಜೀವನದಲಕ್ಷ್ಯ' ಅಥವಾ 'ಆದರ್ಶಮೂರ್ತಿ' ಗಳಲ್ಲ. ಅವರ ಮೇಲೆ ದೃಷ್ಟಿಯನ್ನಿಟ್ಟಿದ್ದು ಅವರೇ ಬಿದ್ದು ಹೋದರೆ ಆಗ ನೀವೇನು ಮಾಡುವಿರಿ? ಪರಮಪಿತ ಪರಮಾತ್ಮನೊಬ್ಬನು ಮಾತ್ರ ಸಂಪೂರ್ಣ, ಅವನನ್ನೇ ಸದಾ ನಮ್ಮ ಮುಂದೆ ಇಟ್ಟುಕೊಳ್ಳಬೇಕು. ತದನಂತರ ಮನುಷ್ಯ ಸೃಷ್ಟಿಗೆ ಸರ್ವಾಧಿಕ ಜ್ಞಾನ-ಗುಣ ಪ್ರವೀಣರಾಗಿರುವ 'ಪ್ರಜಾಪಿತ ಬ್ರಹ್ಮಾ' ಮತ್ತು 'ಜಗದಂಬ ಸರಸ್ವತಿ'ಯವರ ಆದರ್ಶವನ್ನು ನಿಮ್ಮ ಮುಂದೆ ಇಟ್ಟುಕೊಳ್ಳಿರಿ. ಇತರರ ಅವಗುಣವನ್ನು ನೋಡುವ ದುರಭ್ಯಾಸವನ್ನು ಬಿಟ್ಟು ನಮ್ಮಲ್ಲಿ ದಿವ್ಯಗುಣಗಳು ತುಂಬಿವೆಯೋ ಇಲ್ಲವೇ ಎಂಬುದನ್ನು ನೋಡಿಕೊಳ ಬೇಕು.

ಒಬ್ಬ ಚಿತ್ರಕಾರನು ಯಾವುದೋ ವ್ಯಕ್ತಿಯ ಚಿತ್ರವನ್ನು ಬರೆಯುತ್ತಿರುವಾಗ ತಾನು ಬರೆಯುತ್ತಿರುವ ಚಿತ್ರವು ಆ ವ್ಯಕ್ತಿಯಂತೆಯೇ ಮುಖಲಕ್ಷಣ, ತೇಜಸ್ಸು, ಛಾಯೆಗಳನ್ನುಳ್ಳದ್ದಾಗಿರುವುದೇ ಇಲ್ಲವೇ ಎಂಬುದನ್ನು ಹೋಲಿಸಿ ನೋಡುತ್ತಾನೆ. ಇದೇ ರೀತಿಯಲ್ಲಿ ನಾವೂ ಸಹ ಪಿತಾಶ್ರೀ ಬ್ರಹ್ಮಾರವರಂತೆ ಮಾತೇಶ್ವರಿ ಸರಸ್ವತಿಯವರಂತೆ ಆತ್ಮನಿಷ್ಠರು, ಸಂಯಮಿಗಳೂ, ತ್ಯಾಗಿಗಳೂ, ನಿರಾಡಂಬರರೂ ದೀರ್ಘದರ್ಶಿಗಳೂ, ಈಶ್ವರೀಯ ವಿದ್ಯೆಯಲ್ಲಿ ಶ್ರದ್ಧಾವಂತರೂ. ಯೋಗನಯನರೂ, ವಿಶ್ವ ಶಕ್ತಿಯ ಸ್ಫೂರ್ತಿಗೆ ಪಾತ್ರರಾದ ವಿಶ್ವವ್ಯಕ್ತಿಗಳೂ ಆಗಿದ್ದೇವೆಯೋ ಎಂದು ಹೋಲಿಸಿ ನೋಡಿಕೊಳ ಬೇಕು. ಈ ಪ್ರಕಾರವಾದ ಲಕ್ಷ್ಯವನ್ನು ನಮ್ಮ ಮುಂದಿಟ್ಟುಕೊಂಡು, ನಮ್ಮಲ್ಲಿನ ನಿರ್ಬಲತೆಗಳ ಅವಗುಣಗಳಿಂದ ದೂರವಾಗಲು ಪ್ರಯತ್ನಿಸುತ್ತಿದ್ದರೆ ನಮಗೆ ಅವಗುಣದರ್ಶನದ ಅವಕಾಶವೇ ಇಲ್ಲದಂತಾಗುತ್ತದೆಯಲ್ಲದೆ ಅದರ ಭಾವನೆಯೂ ನಮ್ಮಲ್ಲಿ ಏಳಲಾರದು.

## ಅನುಮಾನ ಅಥವಾ ಮನೋಕಲ್ಪನೆ

ಅನೇಕ ವೇಳೆ ಮನುಷ್ಯನು ಬೇರೆ ವ್ಯಕ್ತಿಯನ್ನು ತಪ್ಪಾಗಿ ತಿಳಿಯುತ್ತಾನೆ. ಆ ವ್ಯಕ್ತಿಯ ಚಲನೆ ಮತ್ತು ಜೀವನವನ್ನು ನೋಡಿ ಅವನಲ್ಲಿ ಯಾವುದೋ ದೋಷದ ಅನುಮಾನವಾಗುತ್ತದೆಯಾದಾಗ್ಯೂ ಅವನ ಆ ಅನುಮಾನವು

ತಪ್ಪಾಗುತ್ತದೆ. ಆ ಅನುಮಾನಿತ ದೋಷವು ಪ್ರಮಾಣಿತವಾಗದಿದ್ದರೂ ಅವನು ಅಂದಾಜಿನ ಮೇಲೆ ಆ ವ್ಯಕ್ತಿಯು ಕೆಟ್ಟವನೆಂದು ತೀರ್ಮಾನಿಸುತ್ತಾನೆ ಮತ್ತು ಅವನೊಡನೆ ವ್ಯವಹರಿಸುವ ಸಮಯದಲ್ಲಿ ತನ್ನ ದೃಷ್ಟಿ ಮತ್ತು ವೃತ್ತಿಯಲ್ಲಿ ಅನುಮಾನಿತ ಅಥವಾ ಮನೋಕಲ್ಪನೆಯ ಅವಗುಣವನ್ನೇ ತುಂಬಿಕೊಂಡಿರುತ್ತಾನೆ.

ಉದಾಹರಣೆಗೆ ಒಬ್ಬನು ಮತ್ತೊಬ್ಬ ವ್ಯಕ್ತಿಯನ್ನು ತನ್ನ ಮನೆಗೆ ಭೋಜನಕ್ಕಾಗಿ ಆಹ್ವಾನಿಸುತ್ತಾನೆ, ಈಗ ಅವಗುಣಗ್ರಾಹಿ ಮನುಷ್ಯನು—"ಆ ವ್ಯಕ್ತಿಯು ನನ್ನನ್ನು ಯಾವುದೋ ಸ್ವಾರ್ಥಕ್ಕಾಗಿ ಭೋಜನದ ನೆಪದಿಂದ ಕರೆಸಿಕೊಂಡಿದ್ದಾನೆ. ನನಗೆ ಊಟ ಉಪಚಾರಗಳಿಂದ ಸತ್ಕರಿಸಿ ಕಾರ್ಯ ಮಾಡಿಸಿಕೊಳ್ಳಲು ಹೀಗೆ ಸಂಚು, ಯುಕ್ತಿ, ಚಾತುರ್ಯವನ್ನು ಹೂಡಿದ್ದಾನೆ" ಎಂಬುದಾಗಿ ಅನುಮಾನ ಪಡುತ್ತಾನೆ ಮತ್ತು ಇತರರಿಗೂ ಇದನ್ನೇ ಹೇಳುತ್ತಿರುತ್ತಾನೆ. ವಾಸ್ತವವಾಗಿ ಆ ಮನುಷ್ಯನು ಈ ವ್ಯಕ್ತಿಯನ್ನು ಸತ್ಯ ಸ್ನೇಹದಿಂದ ಆಹ್ವಾನಿಸಿದ್ದನು. ಈ ರೀತಿಯಲ್ಲಿ ಇತರ ವ್ಯಕ್ತಿಗಳಲ್ಲಿ ದೋಷವನ್ನೂ ಕಲ್ಪಿಸುವುದು, ಅವಗುಣ ದರ್ಶನದ ಒಂದು ವಿಚಿತ್ರ ಮತ್ತು ವ್ಯಾಪಕರೂಪ. ಇಂದು ಎಲ್ಲರೂ ಸಹ ಒಬ್ಬರು ಮತ್ತೊಬ್ಬರ ಬಗ್ಗೆ ಅನುಮಾನವನ್ನಿಟ್ಟು ತನ್ನ ಮನಸ್ಸನ್ನೂ ಕೆಡಿಸಿಕೊಳ್ಳುವುದಲ್ಲದೆ ಇತರರಿಗೂ ಮನೋಕಲ್ಪನೆಯ ಅಥವಾ ಹೇಳಿ-ಕೇಳಿದ ಕುಹಕ ಮಾತುಗಳನ್ನು ಹರಡುವ ದುಷ್ಕಾರ್ಯವನ್ನು ಮಾಡುತ್ತಿರುತ್ತಾರೆ.

ಇದಕ್ಕಾಗಿ ರಾಮಾಯಣದಲ್ಲಿನ ಒಂದು ಸುಂದರ ಉದಾಹರಣೆಯನ್ನೇ ತೆಗೆದುಕೊಳ್ಳಬಹುದು. ರಾಮನು ರಾಜನಾದರೆ ಕೈಕೇಯಿಯು ದಾಸಿಯಂತಿರಬೇಕಾಗುತ್ತದೆ, ಭರತ ಶತ್ರುಘ್ನರು ಸೇವಕರೋಪಾದಿಯಲ್ಲಿ ನಡೆಯಬೇಕಾಗುತ್ತದೆಯೆಂಬ ಅನುಮಾನವು ಮಂಥರೆಗೆ ಬಂದಿತು. ಈ ಮಿಥ್ಯಾ ಅನುಮಾನದ ನಂತರ ಮಂಥರೆಯು ಕೈಕೇಯಿಯ ಕಿವಿಯಲ್ಲಿ ಎಂತಹ ಮಾತುಗಳನ್ನು ತುಂಬಿದಳೆಂದರೆ ಅದರಿಂದ ಆಕೆಯು ತನ್ನ ಪತಿ ದಶರಥನ ಮಾತೊಂದನ್ನು ಕೇಳದಂತಾದಳು, ಪರಿಣಾಮವು ಎಷ್ಟು ಭಯಂಕರವಾಯಿತು? ರಾಮನು ವನವಾಸಕ್ಕೆ ತೆರಳಬೇಕಾಯಿತು, ಕೌಸಲ್ಯೆಯು ಬಿರುಗಾಳಿಗೆ ಸಿಕ್ಕ ತರಗೆಲೆಯಂತಾದಳು, ಪುತ್ರ ವಿರಹದಗ್ಧನಾದ ದಶರಥನ ಉನ್ಮಾದತೆ ಭೀಷಣವಾಗಿ ಉಲ್ಬಣಿಸಿ ಮೃತ್ಯುವನ್ನು

ಪ್ಪಿದನು, ಭರತನಿಗೆ ರಾಮನ ಅಗಲಿಕೆಯಾಯಿತು, ಸಂತೋಷದಿಂದ ನಲಿಯು ತ್ತಿದ್ದ ಅಯೋಧ್ಯೆಯು ಶೋಕದ ಮಡುವಿನಲ್ಲಿ ಮುಳುಗಿತು. ಮಂಥರೆಯ ಮಿಥ್ಯಾ ಅನುಮಾನ ಅಥವಾ ದೋಷದ ಕಲ್ಪನೆಯ ಪರಿಣಾಮವನ್ನು ನೋಡಿರಿ!! ಕೈಕೇಯಿಯೂ ಸಹ ಆ ಮಿಥ್ಯಾ ಅನುಮಾನದ ಬಗ್ಗೆ ವಿಶ್ವಾಸವನ್ನಿಟ್ಟಳು ! ಇಂದಿಗೂ ಸಹ ಜನರು ಹೇಳಿ-ಕೇಳಿದ ಹಾಗೂ ಅನುಮಾನಿತ ಮನೋ ಕಲ್ಪಿತ ಪುರಾಣಗಳ ಮೇಲೆ ಸಹಜವಾಗಿ ವಿಶ್ವಾಸವನ್ನಿಡುವರು ಮತ್ತು ಸ್ವತಃ ತಮ್ಮ ವಿವೇಕದಿಂದ ಕಾರ್ಯವನ್ನು ಮಾಡುವುದಿಲ್ಲ ಹಾಗೂ ಕೈಕೇಯಿಯು ತನ್ನ ಪ್ರಿಯವಲ್ಲಭ ದಶರಥನ ಮಾತನ್ನು ಕೇಳದವಳಾದಂತೆ ಜನರು ತಮ್ಮ ಸ್ವಜನ ಸಹೃದಯರ ಮಾತನ್ನೇ ಕೇಳುವುದಿಲ್ಲ.

ಮಂಥರೆಯು ಮಿಥ್ಯಾ ಅನುಮಾನವನ್ನೇಕೆ ಪಟ್ಟಳು? ಏಕೆಂದರೆ ಅವಳು ಕೈಕೇಯಿಯ ದಾಸಿ. ಕೈಕೇಯಿಯ ಪುತ್ರ ಭರತನು ರಾಜನಾದರೆ ತನ್ನ ಸ್ವಾರ್ಥವು ಪೂರ್ಣವಾಗುವುದೆಂದು ಬಗೆದಳು. ಕೌಸಲ್ಯೆಯು ಕೈಕೇಯಿಯ ಸವತಿಯಾಗಿದ್ದಳು. ಅವಳ ಮೇಲೆ ಕೈಕೇಯಿ ಮತ್ತು ಮಂಥರೆಗೆ ಈರ್ಷೆ ಹುಟ್ಟಿತು ಮತ್ತು ಸ್ವಾರ್ಥದ ಕಾರಣದಿಂದ ದ್ವೇಷ ಹುಟ್ಟಿತು. ದ್ವೇಷದಿಂದ ರಾಮನಲ್ಲಿ ಕೆಡುಕನ್ನು ಕಂಡರು ಮತ್ತು ಈ ಕಾರಣದಿಂದ ಅವನನ್ನು ಸಾಮ್ರಾಟ ಪದವಿಯಿಂದ ಬಿಡಿಸಿ ವನವಾಸಕ್ಕೆ ತೆರಳುವಂತೆ ಮಾಡಿದರು.

ಜಿಜ್ಞಾಸು — ಸಹೋದರಿಯವರೇ ನಾನು ಈ ಮಿಥ್ಯಾ ಅನುಮಾನದ ಬಗ್ಗೆ ಗಮನವನ್ನಿಟ್ಟಿರಲಿಲ್ಲ. ಇದೇ ಮೊದಲ ಬಾರಿಗೆ ನನಗೆ ಈ ದುರ್ಗುಣ ಅಥವಾ ದೋಷ ದೃಷ್ಟಿಯು ನೆಲೆಸಿಕ್ಕಿತು. ಇದು ಅತಿ ಭಯಂಕರ ದುರ್ಗುಣ ! ಇದು ಇಡೀ ಗೃಹವನ್ನೇ ಕಲಕಿಬಿಡುವಂತಹುದು. ಅಂತಹ ನಿರ್ದೋಷಿ ರಾಮ ನನ್ನು ವನವಾಸಕ್ಕೆ ಕಳಿಸಿ ಮಹಾ ಅನರ್ಥವನ್ನುಂಟುಮಾಡಿತು.

ಬ್ರಹ್ಮಾಕುಮಾರಿ—ನೋಡಿದಿರಾ, ಅಖಂಡ ಸಾಮ್ರಾಜ್ಯ ದಜನತೆಯೇ ರಾಮನು ಮಹಾತ್ಮ, ವಿಶ್ವವಂದ್ಯನೆಂದು ಸ್ವೀಕರಿಸಿದರೂ ಅಂತಹ ವ್ಯಕ್ತಿಯೂ ದೋಷಯುಕ್ತನಾದನು. ರಾಮಾಯಣದ ಈ ಕಥೆಯನ್ನು ಐತಿಹಾಸಿಕವೆಂದು ಒಪ್ಪಲಿ ಬಿಡಲಿ, ಆದರೆ ಈ ಕಥೆಯ ಆಧ್ಯಾತ್ಮಿಕ ಭಾವಾರ್ಥವನ್ನು ನಿಮಗೆ ತಿಳಿಸು

ತ್ತಿರುವೆನಷ್ಟೆ ಮತ್ತು ಇಂತಹ ವೃತ್ತಾಂತಗಳು ಇಂದಿನ ಪ್ರಪಂಚದಲ್ಲಿ ಅದೆಷ್ಟೋ ನಡೆಯುತ್ತಿವೆಯೆಂಬುದನ್ನು ನಿಮಗೆ ತಿಳಿಸಬಯಸುತ್ತೇನೆ.

**ಜಿಜ್ಞಾಸು—**ಹೀಗಾಗುತ್ತವೆ ಎಂಬುದನ್ನು ನಾನು ಒಪ್ಪುತ್ತೇನೆ ಮತ್ತು ತಿಳಿದಿದ್ದೇನೆ. ಅಸ್ತು ; ಇನ್ನು ಈ ಅವಗುಣವು ನಿವಾರಣೆಯಾಗುವುದು ಹೇಗೆ ಅಥವಾ ಈ ಗುಣಗ್ರಾಹಕ ವೃತ್ತಿಯನ್ನು ಧಾರಣೆಮಾಡುವ ಬಗೆ ಹೇಗೆಂಬುದನ್ನು ತಿಳಿಸಿರಿ.

**ಬ್ರಹ್ಮಕುಮಾರಿ—**ಅದನ್ನಂತೂ ನಾನು ಹೇಳುತ್ತೇನೆ. ಆದರೆ ಅವಗುಣ-ದರ್ಶನ ಅಥವಾ ದೋಷ-ದೃಷ್ಟಿಯ ಸಂಸ್ಕಾರವು ಜ್ಞಾನ ಮಾರ್ಗದಲ್ಲಿ ಇನ್ನೂ ಎರಡು ಭಯಂಕರ ರೂಪಧರಿಸಿ ಬರುತ್ತದೆ. ಅದನ್ನು ಮೊದಲು ಅರಿಯಿರಿ.

**ಜಿಜ್ಞಾಸು —** ಅವು ಯಾವುವು ?

**ಬ್ರಹ್ಮಕುಮಾರಿ —** ಮೊದಲನೆಯದಾಗಿ ಅವಗುಣವನ್ನು ನೋಡುವ ಮನುಷ್ಯನ ಮನದಲ್ಲಿ ಸ್ವಲ್ಪ ಸಮಯದ ನಂತರ ತನ್ನ ಅಪೇಕ್ಷೆಯಿಂದ ತಾನೇ ನಿರಾಶನಾಗುವಷ್ಟು ಅವಗುಣವು ಅವನಲ್ಲಿ ತುಂಬಿಬಿಡುತ್ತವೆ. ಅವನು ಯುಕ್ತಿ-ಯುಕ್ತ ರೀತಿಯಲ್ಲಿ ಪುರುಷಾರ್ಥ ಮಾಡುವುದಕ್ಕೆ ಬದಲಾಗಿ ಇತರರ ಕುಂದನ್ನೇ ನೋಡುವ ಕಾರಣದಿಂದ ತನ್ನ ಆಧ್ಯಾತ್ಮಿಕ ಪ್ರಗತಿಯನ್ನು ನೋಡದೆ ತನಗೆ ತಾನೇ ಆಶಾಭಂಗನಾದವನಾಗಿ, ಭರವಸೆಯಿಲ್ಲದವನಾಗಿ, ಹತಾಶನಾಗುತ್ತಾನೆ. ಪ್ರಾರಂಭದಲ್ಲಿ ಅವನು ಪವಿತ್ರತೆ ಮತ್ತು ದೇವಪದವಿಯ ಪ್ರಾಪ್ತಿಯ ಅಭ್ಯರ್ಥಿಯಾಗಿರುತ್ತಾನೆ. ಆದ್ದರಿಂದ ಅತಿ ಉತ್ಸಾಹದಿಂದ ಪುರುಷಾರ್ಥ ಮಾಡುತ್ತಾನೆ ಮತ್ತು ಮಾಯೆಯ ಅನೇಕ ಪರೀಕ್ಷೆಗಳಿಂದಲೂ ಪಾರಾಗುತ್ತಾನೆ. ಕಾಲ ಕ್ರಮೇಣ ಅವಗುಣಗಳ ಕಾರಣದಿಂದ ಬುದ್ಧಿ ಕೆಡುವುದರಿಂದ ಅವನು ಅಭ್ಯರ್ಥಿಯಾಗಿ ಉಳಿಯುವುದಿಲ್ಲ. ಯಾರು ಯಾವ ಪರೀಕ್ಷೆಗೂ ಅಭ್ಯರ್ಥಿಯಾಗದಿದ್ದಲ್ಲಿ ಅವರು ಪರೀಕ್ಷೆಯಿಂದ ಹೇಗೆ ತಾನೆ ಉತ್ತೀರ್ಣರಾಗಬಲ್ಲರು ಮತ್ತು ಶ್ರೇಷ್ಠ ಪದವಿಯನ್ನು ಹೇಗೆ ತಾನೆ ಪಡೆದಾರು ? ಹೀಗೆ ಅವನು ತನಗೆ ತಾನೇ ತನ್ನಲ್ಲಿನ

ಅವಗುಣಗಳನ್ನು ನೋಡುತ್ತಾ —"ನಾನಂತೂ ಪರಿವರ್ತನೆಯಾಗುವವನಲ್ಲ; ಜ್ಞಾನವೂ ಬೇಡ ಪುರುಷಾರ್ಥವೂ ಬೇಡ; ನಾನು ಮೊದಲು ಹೇಗಿದ್ದೆನೋ ಅದೇ ಸರಿ, ಇಡೀ ಪ್ರಪಂಚಕ್ಕೆಲ್ಲಾ ಯಾವುದೋ ನನಗೂ ಅದೇ ಸರಿ, ಯಾವ ಚಿಂತೆಯೂ ಇಲ್ಲ." ಎಂಬುದಾಗಿ ಯೋಚಿಸುವನು.

ಎರಡನೆಯದಾಗಿ ಅವನು ಒಬ್ಬ ಮನುಷ್ಯನ ಅವಗುಣವನ್ನು ನೋಡಿದಾಗ ಅವನಲ್ಲಿ ವೈಮನಸ್ಯಗೊಂಡು ಮಾತನಾಡುವನು, ಅವನನ್ನು ಆದರಿಸಿ-ಬೆದರಿಸಲೂ ಪ್ರಾರಂಭಿಸುವನು ಮತ್ತು—"ನಾನು ಇವನನ್ನು ಸರಿಮಾಡುತ್ತೇನೆ: ಇವನು ಹೇಗೆಂದರೆ ಹಾಗೆ!! ಇವನೇನು ಮಹಾ ತಿಳಿದಿದ್ದಾನೆ? ನಾನು ಇವನ ಬುದ್ಧಿಯನ್ನು ಸರಿಮಾಡುತ್ತೇನೆ" ಎಂದು ಹೇಳುತ್ತಾನೆ. ಆದರೆ ಹಾಗೆ ಹೇಳುವವನು ತನ್ನ ಬುದ್ಧಿಯೇ ಕೆಟ್ಟಿದೆ, ಆದ್ದರಿಂದಲೇ ತಾನು ಅವಗುಣವನ್ನು ನೋಡುತ್ತಿರುವೆನು, ತಾನು ಇತರರನ್ನು ಹೇಗೆ ತಾನೇ ಸರಿಮಾಡಲು ಸಾಧ್ಯ? ಸ್ವತಃ ತಾನೇ ಧರ್ಮರಾಜನಿಂದ ಸರಿಹೊಂದಬೇಕಾಗುತ್ತದೆ; ಏಕೆಂದರೆ ಇತರರನ್ನು ಬೆದರಿಸುವುದು ತನ್ನ ವಿಧಾನ ಅಥವಾ ಕಾನೂನಲ್ಲವೆಂಬುದನ್ನು ಅವನು ತಿಳಿದಿರುವುದಿಲ್ಲ.

**ಜಿಜ್ಞಾಸು —** ಅಜ್ಞಾನಿಗಳೂ ಸಹ ಯಾರಾದರೂ ತಪ್ಪನ್ನು ಕಂಡರೆ ಸರ್ಕಾರಕ್ಕೆ ದೂರು (report) ಕೊಡುವರು ಅರ್ಥಾತ್ ಪೋಲೀಸರಿಗೆ ದೂರು ಕೊಡುವರು ಅಥವಾ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡುವರು. ಒಂದು ವೇಳೆ ಹಾಗೆ ದೂರು ಕೊಡದೆ ತಾವೇ ಕಾನೂನನ್ನು ಚಲಾಯಿಸಿದರೆ ಸ್ವತಃ ತಾವೇ ಅಪರಾಧಿಗಳಾಗುವರು.

**ಬ್ರಹ್ಮಾಕುಮಾರಿ—**ನೋಡಿದಿರಾ, ಈ ದೋಷ-ದೃಷ್ಟಿಯ ಕಾರಣದಿಂದ ಮನುಷ್ಯನು ವಿಧಿ-ವಿಧಾನ ಮತ್ತು ಮಾನಮರ್ಯಾದೆಗಳನ್ನೇ ಮರೆಯುವನು. ಈಶ್ವರನ ಕೈಯನ್ನೂ ಬಿಟ್ಟು ಅನಾಥನಾಗುವನು, ಹಾನಿಯನ್ನು ಪಡೆಯುವನು. ಮನುಷ್ಯನು ಯಾವ ಯುಕ್ತಿಗಳ ಸಹಾಯದಿಂದ ಗುಣಗ್ರಾಹಕವೃತ್ತಿಯನ್ನು ಧಾರಣೆಮಾಡಬಲ್ಲನೆಂಬುದನ್ನು ಈಗ ಕೇಳಿರಿ.

ಮೊಟ್ಟ ಮೊದಲು ಮನುಷ್ಯನು ಸದಾ ತಾನು ಈಶ್ವರನ ಸಂತಾನನೆಂಬುದನ್ನು ನೆನಪಿನಲ್ಲಿಟ್ಟಿರಬೇಕು. ರಾಜಕುಲದ ಬಾಲಕನು ತಾನು ರಾಜಕುಲದವ

ನೆಂಬುದನ್ನು ನೆನಪಿನಲ್ಲಿಟ್ಟಿರುವುದರಿಂದ ರಾಜಕುಲೋಚಿತ ಸಂಸ್ಕಾರ, ನಡತೆ
ಗಳನ್ನು ಧಾರಣೆಮಾಡುತ್ತಾನೆ. ಹಾಗೆಯೇ ಮನುಷ್ಯನು ತಾನು ಈಶ್ವರನ
ಸಂತಾನನೆಂಬುದನ್ನು ನೆನಪಿನಲ್ಲಿಟ್ಟರೆ ಅವನು ಈಶ್ವರೀಯ ಗುಣಗಳನ್ನು
ಧಾರಣೆಮಾಡುವುದರ ಕಡೆಗೆ ಗಮನಕೊಡುತ್ತಾನೆ. ಮನುಷ್ಯನು ಯಾವುದರ
ಕಡೆಗೆ ಪೂರ್ಣ ಗಮನ ಕೊಟ್ಟಿರುತ್ತಾನೆಯೋ ಆ ದಿಸೆಯಲ್ಲಿಯೇ ಅವನ ಪುರು-
ಷಾರ್ಥ ನಡೆಯುತ್ತದೆ. ಆದ್ದರಿಂದ ಬೆಳಗ್ಗೆ ಎಚ್ಚರವಾಗುತ್ತಲೇ ಹಾಸಿಗೆ
ಯಿಂದ ಕಾಲ್ತೆಗೆದು ನೆಲಕ್ಕಿಡುವ ಮೊದಲೇ ಕೋಣೆಯಲ್ಲಿ ತನ್ನ ದೃಷ್ಟಿಯನ್ನು
ಹಾಯಿಸುವುದಕ್ಕೆ ಮೊದಲೇ "ನಾನು ಈಶ್ವರನ ಸಂತಾನ" ಎಂಬ ಹೊಚ್ಚ
ಹೊಸ ಸ್ಮೃತಿಯನ್ನು ತಂದುಕೊಳ್ಳಬೇಕು. ಅಮೃತ ವೇಳೆಯಲ್ಲಿ ಮನಸ್ಸು
ಸ್ವಚ್ಛವಾಗಿರುತ್ತದೆ.

ವಾತಾವರಣ ಪೂಸತೋ ಪ್ರಧಾನವಾಗಿರುತ್ತದೆ. ಯಾದ್ದರಿಂದ
ಈ ಸಂಕಲ್ಪ ರೂಪದ ಬೀಜವನ್ನು ಮನದಲ್ಲಿ ಬಿತ್ತುವುದರಿಂದ ತದನಂತ-
ರವೂ ಇದೇ ಸ್ಮೃತಿಯು ಅಚ್ಚಳಿಯದೆ ಉಳಿದಿರುತ್ತದೆ. ಪುನಃ ಪುನಃ, ಮಧ್ಯೆ
ಮಧ್ಯೆ, ಕುಳಿತಾಗ-ನಿಂತಾಗ, ತಿರುಗಾಡುವಾಗ "ನಾನು ಈಶ್ವರನ ಸಂತಾನ"
(ಈಶ್ವರ ಶಬ್ದವನ್ನು ಮನಸಾರ ಪ್ರೀತಿಯಿಂದ ನೆನೆಯಬೇಕು) ಎಂಬಿಷ್ಟೇ
ಸ್ಮೃತಿಯನ್ನು ತಂದುಕೊಳ್ಳುತ್ತಿದ್ದರೆ ತಾನು ಈಶ್ವರೀಯ ಲಕ್ಷಣಗಳುಳ್ಳವ
ನಾಗಬೇಕೆಂಬ ಸ್ಫೂರ್ತಿಯು ಒಳಗೊಳಗೇ ಹರಿದಾಡತೊಡಗುತ್ತದೆ. ಈಶ್ವರನು
ಪ್ರೀತಿಸಾಗರ, ಕ್ಷಮಾಸಾಗರ ಕಲ್ಯಾಣಕಾರಿ, ದಯಾಸಾಗರನಾದುದರಿಂದ
ಅವನನ್ನು ಎಲ್ಲರೂ ಪ್ರೀತಿಸುವರು. ಆದ್ದರಿಂದ ನಾವೂ ಸಹ ಪ್ರೇಮಸ್ವರೂಪ,
ಶಾಂತಸ್ವರೂಪ, ದಯಾಹೃದಯಿ, ಕ್ಷಮಾಶೀಲ, ಕಲ್ಯಾಣಕಾರಿ, ಪರೋಪಕಾರಿ,
ಉದಾರ ಚಿತ್ತ ಹಾಗೂ ಮಹಾದಾನಿಗಳಾಗಬೇಕು. ಪರಮಾತ್ಮನು ಜ್ಞಾನ
ಮೂರ್ತಿ ಪ್ರೇಮಮೂರ್ತಿಯಾದುದರಿಂದ ಅವನು ಎಲ್ಲರನ್ನೂ ಆಕರ್ಷಿಸುವನು.
ಆದ್ದರಿಂದ ನಾವೂ ಸಹ ಜ್ಞಾನಮೂರ್ತಿ, ದಿವ್ಯಗುಣಮೂರ್ತಿ ಮತ್ತು ಪ್ರೇಮ
ಮೂರ್ತಿಗಳಾಗಬೇಕು.

ಅಲ್ಲದೆ ತಾನು ೧೬ ಕಲಾ ಸಂಪೂರ್ಣ ಸರ್ವಗುಣ ಸಂಪನ್ನರಾದ ಶ್ರೀಲಕ್ಷ್ಮಿ,
ಶ್ರೀ ನಾರಾಯಣರಂತಾಗಬೇಕೆಂಬ ಲಕ್ಷ್ಯವನ್ನು ನೆನಪಿನಲ್ಲಿಟ್ಟಿರಬೇಕು. ನಾವು
ಎಷ್ಟು ದಿವ್ಯಗುಣಗಳನ್ನು ಧಾರಣೆಮಾಡುತ್ತಾ ಹೋಗುತ್ತೇವೆಯೋ ಅಷ್ಟೇ

ಲಕ್ಷ್ಯದ ಹತ್ತಿರ ತಲಪುತ್ತೇವೆ. ಮನುಷ್ಯನು ತನ್ನ ಕೂದಲು ಸರಿಯಾಗಿ ಕುಳಿತಿವೆಯೋ, ಮುಖವು ಸ್ವಚ್ಛ ಸುಂದರವಾಗಿದೆಯೋ ಎಂಬುದನ್ನು ಕನ್ನಡಿಯಲ್ಲಿ ನೋಡಿಕೊಳ್ಳುವಂತೆ ನಾವೂ ಸಹ ಪ್ರತಿ ದಿನ ಜ್ಞಾನ ಸ್ನಾನ ಮಾಡಿದ ನಂತರ ದಿನದ ಕಾರ್ಯಕ್ಕಾಗಿ ಹೊರಡುವ ಮುನ್ನ, ನಾವು ದಿವ್ಯಗುಣಗಳನ್ನು ಸರಿಯಾಗಿ ಧಾರಣೆ ಮಾಡಿರುವೆವೋ ಇಲ್ಲವೋ ಎಂಬುದನ್ನು ನಮ್ಮ ಮನಸ್ಸೆಂಬ ದರ್ಪಣದಲ್ಲಿ ನೋಡಿಕೊಳ್ಳಬೇಕು. ಸೊಗಸುಗಾರ ವ್ಯಕ್ತಿಗಳು ಒಂದು ಚಿಕ್ಕ ಕನ್ನಡಿಯನ್ನು ತಮ್ಮಲ್ಲಿಟ್ಟುಕೊಂಡು ಆಗಾಗ್ಗೆ ಅದನ್ನು ತೆಗೆದು ಅದರಲ್ಲಿ ತಮ್ಮ ಮುಖದ ಅಂದ ಚೆಂದವನ್ನು ನೋಡಿಕೊಳ್ಳುವಂತೆ ನಾವೂ ಸಹ ಶ್ರೀ ಲಕ್ಷ್ಮಿ, ಶ್ರೀ ನಾರಾಯಣರಂತೆ ಸಭ್ಯ ಸಂಪ್ರದಾಯಗಳಿಂದ ಅಲಂಕೃತವಾಗಿದ್ದೇವೆಯೋ ಎಂಬುದನ್ನು ನೋಡಿಕೊಳ್ಳಬೇಕು. ಒಂದು ವೇಳೆ ಮಾಯೆಯ ಬಿರುಗಾಳಿ ಬೀಸಿ ತಲೆಯ ಶೃಂಗಾರ ಕೆಟ್ಟಿದ್ದರೆ ಅದನ್ನು ಜ್ಞಾನವೆಂಬ ಬಾಚಣಿಗೆಯಿಂದ ಪುನಃ ಅಲಂಕರಿಸಿಕೊಳ್ಳಬೇಕು. ಈಶ್ವರೀಯ ಸ್ಮೃತಿಯನ್ನು ಸದಾ ಹೊಚ್ಚ ಹೊಸದಾಗಿಟ್ಟುಕೊಳ್ಳಲು ಪ್ರಾತಃಸಮಯದಲ್ಲಿ ಎಚ್ಚರವಾಗುತ್ತಲೇ ಮತ್ತು ದಿನದಲ್ಲಿ ಅನೇಕ ಸಾರಿ ಈ ಕೆಳಕಂಡ ಏಳು ಪ್ರಶ್ನೆಗಳನ್ನು ನಮಗೆ ನಾವೇ ಕೇಳಿಕೊಳ್ಳಬೇಕು :—

೧) ತಂದೆ ಶಿವನ ನೆನಪಿದೆಯೆ ?
೨) ಸ್ವರ್ಗದ ಪ್ರಭುತ್ವ ಅಥವಾ ಈಶ್ವರೀಯ ಸಂಪತ್ತು ನೆನಪಿದೆಯೋ ?
೩) ಲಕ್ಷ್ಯ – ಶ್ರೀ ಲಕ್ಷ್ಮಿ ಹಾಗೂ ಶ್ರೀ ನಾರಾಯಣ ಪದವಿಯು ನೆನಪಿದೆಯೋ?
೪) ಈಶ್ವರೀಯ ಕುಲದ ನೆನಪಿದೆಯೋ ?
೫) ಪುರುಷಾರ್ಥದ ನೆನಪಿದೆಯೋ ?
೬) ಕರ್ಮದ ಗತಿಯ ನೆನಪಿದೆಯೋ ?
೭) ಈಶ್ವರೀಯ ಚಿಂತನ ಯಾತ್ರೆಯಲ್ಲಿರುವಿರಾ ?

ನಾವುಗಳು ಈ ಮಾತುಗಳನ್ನು ಸದಾ ನೆನಪಿನಲ್ಲಿಟ್ಟಿದ್ದರೆ ಖಂಡಿತವಾಗಿ ನಮ್ಮಲ್ಲಿ ದಿವ್ಯಗುಣಗಳು ತುಂಬುತ್ತಾ ಹೋಗುತ್ತವೆ ಮತ್ತು ದೋಷ ದೃಷ್ಟಿಯು (Criminal Eye) ತೊಲಗಿ ನಿರ್ದೋಷಿಗಳಾಗುತ್ತಾ ಹೋಗುತ್ತೇವೆ. ಏಕೆಂದರೆ, ಈಶ್ವರೀಯ ಚಿಂತನೆಯು ಎಂತಹ ಸೂಜಿ ಮದ್ದು (Injection) ಎಂದರೆ ಅದರಿಂದ ದಿವ್ಯಗುಣಗಳು ತಾನಾಗಿಯೇ ಆತ್ಮದಲ್ಲಿ ತುಂಬುತ್ತಾ ಹೋಗು

ತ್ತೇವೆ ಮತ್ತು ಕಲ್ಯಾಣಕಾರಿ ಪುರುಷೋತ್ತಮ ಸಂಗಮಯುಗದ ನೆನಪು ಎಂತಹ ದ್ದೆಂದರೆ ಅದರಿಂದ ಪುರುಷೋತ್ತಮರಾಗುವ ಪುರುಷಾರ್ಥದಲ್ಲಿ ತೊಡಗಿಬಿಡುತ್ತೇವೆ ಮತ್ತು ಈಶ್ವರೀಯ ಸಂಪತ್ತು ಅಥವಾ ಸ್ವರ್ಗದ ಪ್ರಭುತ್ವದ ನೆನಪು ಎಂತಹದ್ದೆಂದರೆ ಅದರಿಂದ ರಾಜಕುಲೋಚಿತ ಸಂಸ್ಕಾರವು ಬರುತ್ತದೆ ಮತ್ತು ಪುರುಷಾರ್ಥದಲ್ಲಿ ಅಭಿರುಚಿ ಹುಟ್ಟುತ್ತದೆ. ಬ್ರಾಹ್ಮಣ ಕುಲದ ನೆನಪು ಎಂತಹ ದ್ದೆಂದರೆ ಅದರಿಂದ ನಮ್ಮ ಈ ವಿದ್ಯಾರ್ಥಿ ಜೀವನ ಮತ್ತು ಸಮರ್ಥ ಪುರು-ಷಾರ್ಥ ರೂಪದ ಧರ್ಮ-ಕರ್ಮವೂ ಸದಾ ಸ್ಮೃತಿಯಲ್ಲಿರುವುದು.

ಗುಣಗ್ರಾಹಕತೆಯ ಭಾವಾರ್ಥ- ಗುಣಗಳನ್ನು ಗ್ರಹಣ ಮಾಡುವುದು. ಅಂಗಡಿಗಳಲ್ಲಿ ನಾನಾ ವಸ್ತುಗಳನ್ನಿಟ್ಟಿರುತ್ತಾರೆ ಮತ್ತು ಅಂಗಡಿಗಳ ಮುಂದೆ ದೊಡ್ಡ ಬುಟ್ಟಿಗಳಲ್ಲಿ ಅಥವಾ ಗಾಜಿನ ಪೆಟ್ಟಿಗಳಲ್ಲಿ ಒಳ್ಳೊಳ್ಳೆಯ ಮಾಲುಗಳನ್ನು ಪ್ರದರ್ಶನಕ್ಕಾಗಿ ಇಟ್ಟಿರುತ್ತಾರೆ. ಖರೀದಿ ಮಾಡುವವರು ಆ ಅಂಗಡಿಗಳಲ್ಲಿ ಒಳ್ಳೊಳ್ಳೆಯ ವಸ್ತುಗಳನ್ನು ಕೊಳ್ಳುತ್ತಾರೆ. ಒಳ್ಳೆಯ ವಸ್ತುಗಳು ಸಿಗದಿದ್ದಲ್ಲಿ ಹಾಗೆಯೇ ವಾಪಸು ಬರುತ್ತಾರೆ. ಮತ್ತೆ ಕೆಲವರು ಅಗ್ಗದ ಬೆಲೆಯ ಅಥವಾ ಕಲಬೆರಕೆಯ ವಸ್ತುಗಳನ್ನೇ ಕೊಂಡು ತರುತ್ತಾರೆ. ಹಾಗೆಯೇ ಈ ಪ್ರಪಂಚವೆಂಬ ಸಂತೆಯಲ್ಲಿ ಸತೋಗುಣ, ರಜೋಗುಣ ಮತ್ತು ತಮೋಗುಣ ಈ ಮೂರು ಗುಣಗಳ ಸಂಸ್ಕಾರಗಳು ದೊರಕುತ್ತವೆ. ದೈವೀ, ಆಸುರಿ ಮತ್ತು ಮಾನವೀ ಸ್ತರದ ಸ್ವಭಾವ, ಅವಸ್ಥೆ, ದೃಷ್ಟಿಕೋಣ ಅಥವಾ ನಡೆನುಡಿಗಳಿರುತ್ತವೆ. ಉತ್ತಮ, ಮಧ್ಯಮ ಮತ್ತು ಕನಿಷ್ಠ-ಈ ಮೂರೂ ಶ್ರೇಣಿಯ ಜನರು ಸಿಗುತ್ತಾರೆ. ಆದ್ದರಿಂದ ಈಗ ನಮಗೇನು ಬೇಕು? ನಾವು ಯಾವ ವಸ್ತುವಿನ ಗ್ರಾಹಕರು? ಎಂಬುದಾಗಿ ನಮಗೆ ನಾವೇ ಕೇಳಿಕೊಳ್ಳಬೇಕು. ನಾವು ಸತ್ಯ ಅರ್ಥದಲ್ಲಿ "ಗುಣಗ್ರಾಹಕ"ರಾಗಿದ್ದಲ್ಲಿ ನಾವು ಪ್ರಪಂಚವೆಂಬ ಸಂತೆಯಲ್ಲಿ ವಾಸ್ತವಿಕವಾದ ಕೃತ್ರಿಮವಲ್ಲದ ಗುಣಗಳನ್ನೇ ಆರಿಸಿಕೊಳ್ಳುತ್ತೇವೆ. ಯಾವ ವಸ್ತುಗಳು ನಮ್ಮ ಅಭಿರುಚಿಗಿಲ್ಲವೋ ಅವುಗಳನ್ನು ಬಿಟ್ಟು ಬಿಡುತ್ತೇವೆ. ಆದ್ದರಿಂದ ನಾವು ನಮ್ಮ ಮನಸ್ಸೆಂಬ ಪತ್ರದ ಮೇಲೆ- "ನಾನು ಗುಣಗ್ರಾಹಕನಾಗಿದ್ದೇನೆ. ಸತೋಪ್ರಧಾನ ದೇವತೆಗಳಾದ ಶ್ರೀ ಲಕ್ಷ್ಮೀ-ಶ್ರೀ ನಾರಾಯಣರಲ್ಲಿ, ಪುರುಷೋತ್ತಮ ಸಂಗಮಯುಗದ ಸರ್ವೋತ್ತಮ ಬ್ರಾಹ್ಮಣ ಕುಲ ಭೂಷಣರಲ್ಲಿ ಅಥವಾ ಈಶ್ವರೀಯ ಕುಲದವರಲ್ಲಿ ಯಾವಗುಣಗ

ಇರುತ್ತವೆಯೋ ನಾನು ಆ ಗುಣಗಳ ಗ್ರಾಹಕನೇ ಹೊರತು ಇನ್ನುಳಿದ ಗುಣಗಳು ನನ್ನ ಕರ್ತವ್ಯ, ಇಷ್ಟ, ಆಶಯ, ಅರ್ಥ ಅಥವಾ ಲಕ್ಷಣಕ್ಕಲ್ಲ" ಎಂದು ಅಚ್ಚಳಿಯದಂತೆ ಮುದ್ರೆಯೊತ್ತಬೇಕು. ಆಗ ನಾವು ಅವಗುಣ ದೃಷ್ಟಿಯಿಂದ ಬಿಡುಗಡೆಯಾಗುತ್ತೇವೆ ಅರ್ಥಾತ್ ಅವಗುಣವನ್ನು ನೋಡುತ್ತಿದ್ದರೂ ಅವುಗಳ ಗ್ರಾಹಕರಾಗುವುದಿಲ್ಲ, ದಿವ್ಯಗುಣಗಳನ್ನೇ ಹುಡುಕುತ್ತೇವೆ, ಅವುಗಳಿಗಾಗಿ ಪುರುಷಾರ್ಥ ರೂಪದ ಮೌಲ್ಯವನ್ನು ಕೊಟ್ಟು ಅವುಗಳನ್ನು ಧಾರಣೆಮಾಡುತ್ತೇವೆ.

**ಜಿಜ್ಞಾಸು**—ಸಹೋದರಿಯವರೇ. ಈ ಚರ್ಚೆಯನ್ನು ಕೇಳಿ ನನ್ನ ಮನಸ್ಸಿಗೆ ಬಹು ಹರ್ಷ ಮತ್ತು ಲಾಭವಾಗಿದೆ. ಆದರೆ ನನ್ನಲ್ಲಿ ಎರಡು ಪ್ರಶ್ನೆಗಳು ಏಳುತ್ತಿವೆ. ಒಂದನೆಯದಾಗಿ ಯಾರಾದರೂ ನಮ್ಮ ಮುಂದೆ ಬಂದು ಇತರರ ನಿಂದೆ ಮಾಡುತ್ತಿದ್ದರೆ ನಾವು ಸುಮ್ಮನಿರಬೇಕೆ? ಒಂದು ವೇಳೆ ಆ ನಿಂದೆಯು ಸರಿಯಾಗಿದ್ದು ಆಗಿರುವ ತಪ್ಪನ್ನು ಅವರಲ್ಲಿ ಹೇಳುತ್ತಿದ್ದರೂ ನಾವು ಕೇಳ ಬಾರದೆ? ಅದನ್ನು ಕೇಳದಿದ್ದರೆ ಒಮ್ಮೊಮ್ಮೆ ಹೇಳುವವರಿಗೆ ಸಿಟ್ಟು ಬರುತ್ತದೆ. ಎರಡನೆಯದಾಗಿ ಒಬ್ಬರಲ್ಲಿ ನಾವು ದೋಷವನ್ನು ಕಂಡರೆ ಅದನ್ನು ಇತರರಿಗೆ ಹೇಳಬಾರದೆ? ಅದರ ಗಣನೆಯು 'ನಿಂದೆ' ಯಲ್ಲಿ ಬರುತ್ತದೆಯೆ?

**ಬ್ರಹ್ಮಾಕುಮಾರಿ** — ಈ ಪ್ರಶ್ನೆಯ ಬಗ್ಗೆ ನಾನು ಮೊದಲೇ ಸ್ವಲ್ಪ ಸ್ಪಷ್ಟಪಡಿಸಿದ್ದೇನು. ಯಾರಾದರೂ ನಿಮ್ಮಲ್ಲಿ ಬಂದು ಇತರರ ನಿಂದೆಯನ್ನು ಮಾಡಿದರೆ ಅದನ್ನು ಮೊದಲು ಕೇಳಿ ನಂತರ ಆ ವ್ಯಕ್ತಿಗೆ ಹೇಳಿ, ತಪ್ಪನ್ನು ತಿದ್ದಿರಿ. ನಿಮ್ಮಲ್ಲಿ ಅಷ್ಟು ಜ್ಞಾನ-ಬಲ ಮತ್ತು ಯೋಗ-ಬಲವಿಲ್ಲದಿದ್ದಲ್ಲಿ, ಆ ನಿಂದೆಯು ನಿಮ್ಮ ಅವಸ್ಥೆಯನ್ನೇ ಕೆಡಿಸುವಂತಿದ್ದರೆ ಆ ನಿಂದೆಯನ್ನು ನೀವು ಕೇಳಲೇ ಬಾರದು. ಆ ಮಾತು ಯಾರಿಗೆ ಸಂಬಂಧಪಟ್ಟದ್ದಾಗಿದೆಯೋ ಅವರಿಗೇ ಹೇಳಬೇಕೆಂದು ಆ ವ್ಯಕ್ತಿಗೆ ಹೇಳಿರಿ ಅಥವಾ ತಾನು ಈ ಕಸವನ್ನು ತುಂಬಿಕೊಳ್ಳಲಾರೆನು, ಜ್ಞಾನದಲ್ಲಿ ಯಾರು ದೊಡ್ಡವರಾಗಿರುವರೋ ಅವರಲ್ಲಿ ನೀವು ಹೋಗಿ ಈ ವಿಷಯವನ್ನು ಹೇಳಿರೆಂದು ಹೇಳಿಬಿಡಬೇಕು.

ಯಾರೇ ಆಗಲಿ ಇತರರ ದೋಷ-ವರ್ಣನೆಯನ್ನು ಮಾಡುತ್ತಿದ್ದರೆ ಆಗ ಅವರ ಭಾವನೆ ಮತ್ತು ಲಕ್ಷ್ಯವನ್ನು ನೋಡಬೇಕು. ಅವರು ಈರ್ಷಾ-ದ್ವೇಷದ ವಶರಾಗಿ, ಕ್ರೋಧಾನ್ವಿತರಾಗಿ, ವೈಮನಸ್ಯದಿಂದ ಕಟು ಶಬ್ದಗಳಲ್ಲಿ ದುಃಖಿತ ಮನದಿಂದ ಹೇಳುತ್ತಿರುವರೇ ಅಥವಾ ದೂರು, ನಿಂದೆ, ಚಾಡಿಯ ರೂಪದಲ್ಲಿ ಹೇಳು

ತ್ತಿರುವರೇ ಅಥವಾ ಶಾಂತ ಚಿತ್ತರಾಗಿ, ಸಾಕ್ಷಿಭಾವದಿಂದ ಆ ವ್ಯಕ್ತಿಯ ಶುಭ ಚಿಂತಕರಾಗಿ ಅವನನ್ನು ಸುಧಾರಿಸುವ ಲಕ್ಷ್ಯದಿಂದ ಅವನ ಯಾವುದಾದರೂ ತಪ್ಪು, ಕುಂದು ಅಥವಾ ಕೆಟ್ಟ ಸ್ವಭಾವವನ್ನು ಹೇಳುತ್ತಿರುವರೇ ಎಂಬುದನ್ನು ತಿಳಿದುಕೊಳ್ಳಬೇಕು. ಇದರಿಂದ ಅವರು ಹೇಳುತ್ತಿರುವುದು ನಿಂದೆಯೇ ಅಥವಾ ಆ ವ್ಯಕ್ತಿಯ ಸುಧಾರಣೆಗೆ ಪರಾಮರ್ಶೆಯೇ ಎಂಬುದನ್ನು ನಿರ್ಣಯ ಮಾಡಬಹುದು. ಅದು ಸಲಹೆ ಅಥವಾ ತಿಳುವಳಿಕೆ ಅಥವಾ ಪರಾಮರ್ಶೆಯೇ ಆಗಿದ್ದಲ್ಲಿ ಅದನ್ನು ಕೇಳಿ ನಂತರ ಸಮಯ ಪರಿಸ್ಥಿತಿಯನ್ನು ಅನುಸರಿಸಿ–ಅವನಿಗೆ ತಿಳಿಸಬೇಕು. ಇಲ್ಲದಿದ್ದಲ್ಲಿ ಅದನ್ನು ಕೇಳಲೇ ಬಾರದು ಅಥವಾ ಕೇಳುತ್ತಿದ್ದರೂ ಅದರ ಕಡೆ ಗಮನವೀಯಬಾರದು ಮತ್ತು ಚಿತ್ತದಲ್ಲಿ ಸ್ವಲ್ಪವೂ ತುಂಬಿಕೊಳ್ಳಬಾರದು

ಎರಡನೇ ಪ್ರಶ್ನೆಯ ಉತ್ತರವೂ ಇದರಲ್ಲಿಯೇ ಅಡಗಿದೆ. ನಾವು ಶುಭ ಚಿಂತಕರಾಗಿ, ಸ್ನೇಹ ಪೂರ್ವಕವಾಗಿ ಇತರರ ತಪ್ಪನ್ನು ನಿರ್ಧಾರಿತ ವ್ಯಕ್ತಿಗಳಿಗೆ ತಿಳಿಸಬಹುದು.

**ಜಿಜ್ಞಾಸು** — ಸರಿ. ಸಹೋದರಿಯವರೇ ಈ ಗುಣ ಗ್ರಾಹಕತೆಯ ವಿಷಯದಲ್ಲಿ ಅಥವಾ ದಿವ್ಯಗುಣಗಳ ವಿಷಯದಲ್ಲಿ ಮತ್ತೇನಾದರೂ ಹೇಳಬೇಕಾದುದಿದೆಯೆ ?

**ಬ್ರಹ್ಮಾಕುಮಾರಿ** — ಹೌದು. ಗುಣಗಳೇನೋ ಬಹಳವಾಗಿವೆ. ಅವರ ಒಂದು ಗುಣದ ಸಂಬಂಧವು ಇತರ ದಿವ್ಯ ಗುಣಗಳೊಡನೆ ಬೆಳೆದಿರುತ್ತದೆ ಅಥವಾ ಒಂದರ ಧಾರಣೆಯಿಂದ ಇತರ ದಿವ್ಯ ಗುಣಗಳೂ ಧಾರಣೆಯಾಗುತ್ತವೆ. ನಾನು ಕೆಲವೇ ಮುಖ್ಯ ಗುಣಗಳನ್ನು ಮಾತ್ರ ವರ್ಣಿಸಿದ್ದೇನೆ. ಶುಭ ಚಿಂತೆ, ಏಕತೆ ಸ್ನೇಹ, ನಿಷ್ಠೆಯ ಮೊದಲಾದ ಮಹಾಗುಣಗಳನ್ನೂ ಸ್ಪಷ್ಟ ರೀತಿಯಲ್ಲಿ ತಿಳಿದುಕೊಳ್ಳಬೇಕಾದುದು ಅತ್ಯಾವಶ್ಯಕ. ಅವುಗಳ ಬಗ್ಗೆಯೂ ಕಾಲಕ್ರಮೇಣ ಚರ್ಚೆ ಮಾಡೋಣ. ಈ ಮಹತ್ತರ ದಿವ್ಯಗುಣಗಳಿಗಿಂತಲೂ ಅತಿಶಯವಾಗಿ ಅನೇಕ ಒಳ್ಳೆಯ ಅಭ್ಯಾಸಗಳ ಮೇಲೆ ಅಥವಾ ಕಾರ್ಯವಿಧಿಯ ಮೇಲೆ ಅಥವಾ ಶಿಷ್ಟಾಚಾರ ಸಂಬಂಧದ ನಿಯಮದ ಮೇಲೆ ಪೂರ್ಣಗಮನವೀಯ ಬೇಕು. ಇಲ್ಲದಿದ್ದಲ್ಲಿ ಇವುಗಳ ಅನುಪಸ್ಥಿತಿಯಲ್ಲಿ ನಮಗೆ ಮುಖ್ಯ ದಿವ್ಯ

ಗುಣಗಳೂ ಕಾಣದಾಗುತ್ತವೆ. ಯಾವ ವ್ಯಕ್ತಿಯು ಗುಣಗ್ರಾಹಕನಾಗಿರುವನೋ ಅವನು ಆ ಕಾರ್ಯ ವಿಧಿ ಅಥವಾ ನಡವಳಿಕೆಗಳ ಬಗ್ಗೆ ಪೂರ್ಣಗಮನವೀಯುವನು, ಸಣ್ಣ ವಿಷಯಗಳೆಂದು ಅವನ್ನು ಬಿಡುವುದಿಲ್ಲ, ಏಕೆಂದರೆ ಅವುಗಳೂ ಸಹ ಒಂದಲ್ಲ ಒಂದು ದಿವ್ಯ ಗುಣದ ವಿವಿಧರೂಪವಾಗಿರುತ್ತವೆ.

**ಜಿಜ್ಞಾಸು** — ಅಂತಹ ನಡವಳಿಕೆ, ವರ್ತನೆ, ವಿಧಾನ, ಶಿಷ್ಟಾಚಾರ ಸಂಬಂಧದ ನಿಯಮಗಳನ್ನು ಇಲ್ಲಿ ಉದಾಹರಿಸಿರಿ.

**ಬ್ರಹ್ಮಾಕುಮಾರಿ**—ಅಂತಹವು ಬಹಳವಾಗಿವೆ. ನಾನು ಮುಖ್ಯರೂಪದಲ್ಲಿ ಐದು ಮಾತುಗಳ ಮೇಲೆ ಬೆಳಕನ್ನು ಚೆಲ್ಲುತ್ತೇನೆ.

೧. ಇಬ್ಬರು ವ್ಯಕ್ತಿಗಳು ಮಾತನಾಡುವಾಗ ಅವರ ಮಧ್ಯದಲ್ಲಿ ಮಾತನಾಡುವುದು ಅಥವಾ ಒಬ್ಬ ವ್ಯಕ್ತಿಯು ತನ್ನ ವಿಷಯವನ್ನು ಹೇಳುತ್ತಿರುವಾಗ ಅವನ್ನು ಅಷ್ಟಕ್ಕೆ ತಡೆಯುವುದು ಮತ್ತು ಅಪ್ಪಣೆಯಿಲ್ಲದೆ ತನ್ನ ಮಾತನ್ನು ಪ್ರಾರಂಭಿಸುವುದು–ಇವರಿಂದ ಧೈರ್ಯದ ಕೊರತೆ ಹಾಗೂ ಬುದ್ಧಿಯ ಅಹಂಕಾರವಿದೆಯೆಂದು ಸ್ಪಷ್ಟವಾಗುತ್ತದೆ. ಯಾವ ವ್ಯಕ್ತಿಯಲ್ಲಿ ಧೈರ್ಯ ಅಥವಾ ಗಂಭೀರತೆಯಿಲ್ಲವೋ ಅವನು ಇತರರ ಮಾತನ್ನು ಪೂರ್ಣವಾಗಿ ಕೇಳದೆ ಮಧ್ಯದಲ್ಲಿಯೇ ತನ್ನ ಮಾತನ್ನು ಹೇಳತೊಡಗುವನು ಮತ್ತು ಯಾರಲ್ಲಿ ನಮ್ರತೆಯಿಲ್ಲವೋ ಅವನು ಆಜ್ಞೆಯಿಲ್ಲದೆ ಮಾತನಾಡಿ ಬಿಡುವನು. ಯಾವ ವ್ಯಕ್ತಿಯಲ್ಲಿ ನಮ್ರತೆಯಿರುತ್ತದೆಯೋ ಆ ವ್ಯಕ್ತಿಯು ಇತರರು ಮಾತನಾಡುವಾಗ ಮಧ್ಯೆ ಏನಾದರೂ ಹೇಳಲೇ ಬೇಕಾಗಿದ್ದರೆ—"ತಾವು ಅಪ್ಪಣೆಯಿತ್ತಲ್ಲಿ ನಾನು ಈ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ತಿಳಿಸುತ್ತೇನೆ" ಎಂದು ಕೇಳಿಕೊಳ್ಳುವನು. ಯಾರು ಈ ಶಿಷ್ಟಾಚಾರವನ್ನು ಬಿಡುವರೋ ಅವರಲ್ಲಿ ಬುದ್ಧಿಯ ಅಹಂಕಾರವಿರುತ್ತದೆ. ಅದ್ದರಿಂದಲೇ ಅವರು ತಮ್ಮ ಮಾತನ್ನೇ ದೊಡ್ಡದಾಗಿ ತಿಳಿದು ತಡೆಯದೆ ಅಧೀರರಾಗಿ ಅಸಮಯದಲ್ಲಿ ಮಾತನ್ನೆಸೆಯುವರು.

೨. ಸಮಯದ ಪಾಲನೆಯನ್ನು ಮಾಡದಿರುವುದು—ಯಾವುದಾದರೂ ಸಭೆ, ಸಮಾರಂಭ ನಡೆಯಲಿದೆಯೆಂದು ತಿಳಿಯೋಣ. ಅಲ್ಲಿ ನಾವು ಭಾಷಣ ಮಾಡಲು

ಆಹ್ವಾನವಿದುತ್ತದೆ. ಅಲ್ಲಿಗೆ ನಾವು ಸಮಯಕ್ಕೆ ಸರಿಯಾಗಿ ತಲುಪಬೇಕಲ್ಲವೆ? ಆ ಸಮಾರಂಭಕ್ಕೆ ಅಧ್ಯಕ್ಷರು, ಪ್ರಧಾನರೆಲ್ಲರೂ ತಲುಪಿದ ಮೇಲೂ ನಾವು ತಲುಪದಿದ್ದರೆ ನಮ್ಮಲ್ಲಿ ಶಿಷ್ಟಾಚಾರದ ಕುಂದು ಇದೆ ಮತ್ತು ಅಭಿಮಾನ, ಅಶಿಸ್ತು ಬೇಜವಾಬ್ದಾರಿ, ಇದೆಯೆಂಬುದೂ ಹಾಗೂ ಇತರರ ಸಮಯದ ಬೆಲೆಯೇನೆಂಬುದರ ಅರಿವಿಲ್ಲವೆಂಬುದೂ ಇದರಿಂದ ಸ್ಪಷ್ಟವಾಗುತ್ತದೆ. ನೋಡಿದಿರಾ ಕೇವಲ ಒಂದು ವರ್ತನೆ ಅಥವಾ ಶಿಷ್ಟಾಚಾರ ವಿಹೀನ ಕರ್ಮದಲ್ಲಿ ಎಷ್ಟೊಂದು ಅವಗುಣಗಳು ತುಂಬಿವೆ! ಎಷ್ಟೊಂದು ದಿವ್ಯಗುಣಗಳ ಲೋಪ!!

೩. ಸಮಯ ಮತ್ತು ಸಾಮರ್ಥ್ಯವಿದ್ದರೂ ಇತರರಿಂದ ಸ್ಥೂಲ ಸೇವೆಯನ್ನು ಪಡೆಯುವುದು—ಇದೂ ಸಹ ಅಭಿಮಾನ ಹಾಗೂ ಆಲಸ್ಯದ ಸೂಚಕವಾಗಿದೆ. ಅಭಿಮಾನವಿರುವ ಕಾರಣದಿಂದಲೇ ಮನುಷ್ಯನಿಗೆ ಇತರರು ಚಿಕ್ಕವರು, ತಾನು ದೊಡ್ಡವನು, ಅವರು ತನ್ನ ಸೇವೆಮಾಡಲಿ, ಸೇವೆಮಾಡುವುದು ಅವರ ಕರ್ತವ್ಯ ಎಂಬುದಾಗಿ ತಿಳಿಯುವನು. ಆಲಸ್ಯದ ಕಾರಣದಿಂದಲೂ ಮನುಷ್ಯನು ತನ್ನ ಕಾರ್ಯವನ್ನು ತಾನೇ ಮಾಡಿಕೊಳ್ಳದೆ ಇತರರಿಂದ ಮಾಡಿಸಿಕೊಳ್ಳುವನು ಅಥವಾ ದೇಹಾಭಿಮಾನದ ಕಾರಣದಿಂದ ಮನುಷ್ಯನು ತಾನು ಮಾಡುವ ಕಾರ್ಯ ಇದ್ದಲ್ಲಿ, ಇತರರು ತನಗಾಗಿ ಇದನ್ನು ಮಾಡಿಕೊಡಬೇಕೆಂದು ಯೋಚಿಸುವನು. ಇತರರಿಂದ ಸೇವೆ ಮಾಡಿಸಿಕೊಂಡರೆ ಕರ್ಮದ ಹೊರೆಯು ತನ್ನ ಮೇಲೆ ಏರುತ್ತದೆ ಮತ್ತು ಅವರೊಡನೆ ವಿಕಾರಯುಕ್ತ ಸಂಬಂಧ ಬೆಳೆಸಿದಂತಾಗುತ್ತದೆ ಎಂಬುದನ್ನೂ ಅವನು ಮರೆತಿರುತ್ತಾನೆ.

೪. ಯಾವುದಾದರೂ ಸ್ಥೂಲ ಅಥವಾ ಕೀಳ್ತರದ ಸೇವೆಯನ್ನು ಹೇಳಿದರೆ ಅದನ್ನು ಮಾಡಲು ನಿರಾಕರಿಸುವುದು— ಇದರಿಂದಲೂ ಸಹ ದೇಹಾಭಿಮಾನ, ಘನತೆ–ಗೌರವಗಳ ಇಚ್ಛೆ ಹಾಗೂ ಲೋಕ ಲಜ್ಜೆಯ ಭಾವನೆಯು ತುಂಬಿರುವುದು ಸ್ಪಷ್ಟವಾಗುತ್ತದೆ.

೫. ಇತರರ ಮಾತಿಗೆ ಬೆಲೆ ಕೊಡದಿರುವುದು, ಅವರೊಡನೆ ಆದರ ಪೂರ್ವಕವಾಗಿ ವ್ಯವಹರಿಸದಿರುವುದು—ಅಂತಹ ವ್ಯಕ್ತಿಯು ಇತರರ ಮಾತನ್ನು ಕೇಳುತ್ತಲೇ ಮುಖವನ್ನು ಓರೆಮಾಡುವನು ಅಥವಾ ಕೇಳದಂತಿರುವನು ಅಥವಾ ಬೇಗ

ಉತ್ತರ ಕೊಟ್ಟು ಮಾತನ್ನು ಬದಲಿಸುವನು. ಇದೂ ಸಹ ಸ್ನೇಹದ ಕೊರತೆ, ತಿರಸ್ಕಾರ ಭಾವನೆ, ದೋಷ ದೃಷ್ಟಿ ಹಾಗೂ ತನ್ನ ಬುದ್ಧಿಯ ಅಭಿಮಾನದ ಸೂಚಕವಾಗಿದೆ. ಆದರೆ ಯಾವ ವ್ಯಕ್ತಿಯು ಶಿಷ್ಟಾಚಾರಿಯಾಗಿರುವನೋ ಅವನಿಗೆ ಇತರರ ಮಾತು ಹಿಡಿಸದಿದ್ದರೂ ಅವರ ಮಾತನ್ನು ಕೇಳಿ ನಂತರ "ನಿಮ್ಮ ಮಾತು ಸರಿಯಾಗಿದೆ........ಆದರೆ...." ಈ ಪ್ರಕಾರವಾಗಿ ಮಾತನ್ನು ಹೇಳಲು ಪ್ರಾರಂ-ಭಿಸಿ ನಮ್ರತಾ ಪೂರ್ವಕವಾಗಿ ತನ್ನ ವಿಚಾರವನ್ನು ಇತರರ ಮುಂದಿಡುವನು. ಈ ಪ್ರಕಾರವಾಗಿ ನಾನು ಹೇಳಿದ ಕೆಲವು ಶಿಷ್ಟಾಚಾರಕ್ಕೆ ಸಂಬಂಧಿಸಿದ ಮರ್ಯಾದೆ, ನಡತೆ, ವಿಧಾನಗಳ ಮೇಲೆ ಅವಶ್ಯವಾಗಿ ಗಮನಕೊಡಬೇಕು.

**ಜಿಜ್ಞಾಸು —** ಸಹೋದರಿಯವರೇ, ನಾನು ಶಿವತಂದೆಯವರ ಹಾರ್ದಿಕ ಧನ್ಯವಾದಿಯಾಗಿದ್ದೇನೆ. ಏಕೆಂದರೆ ಅವರು ನನ್ನ ಜೀವನವನ್ನು ಶ್ರೇಷ್ಠ ಮಾಡಲು ಇಷ್ಟೆಲ್ಲಾ ಅತ್ಯಮೂಲ್ಯ ಯುಕ್ತಿಗಳನ್ನು ವಿವರಿಸಿರುವರು !

**ಬ್ರಹ್ಮಾಕುಮಾರಿ —** ನಾವು ಶಿವತಂದೆಯವರಿಗಂತೂ ಕೋಟಿ ಕೋಟಿ ಧನ್ಯವಾದಗಳನ್ನು ಅರ್ಪಿಸೋಣ. ಇದಕ್ಕೂ ಅತಿರಿಕ್ತವಾಗಿ ಪಿತಾಶ್ರೀ ಬ್ರಹ್ಮಾರವ ರಿಗೂ ಅನಂತಾನಂತ ಧನ್ಯವಾದಗಳನ್ನು ಅರ್ಪಿಸೋಣ, ಏಕೆಂದರೆ ಪುರುಷಾ-ರ್ಥದ ಆದರ್ಶ ಸ್ವರೂಪವನ್ನು ನಾವು ಅವರ ಜೀವನವನ್ನು ನೋಡಿ ಕಲಿತೆವು. ನಿರಾಕಾರ ಶಿವಪರಮಾತ್ಮನು ನಮಗೆ ಪವಿತ್ರತೆ ಮತ್ತು ದಿವ್ಯಗುಣಗಳ ಧಾರಣೆಯ ಅತ್ಯಮೂಲ್ಯ ಯುಕ್ತಿಗಳನ್ನು ಕಲಿಸುವನು; ಆದರೆ ಪವಿತ್ರ, ದಿವ್ಯಗುಣ ಸಂಪನ್ನ ಅಥವಾ ಕಮಲ ಪುಷ್ಪ ಸಮಾನ ಜೀವನವೆಂದು ಯಾವುದಕ್ಕೆ ಹೇಳ ಲಾಗುತ್ತದೆಯೋ – ಇದರ ಸಾಕಾರ ಉದಾಹರಣೆ ಅಥವಾ ಆದರ್ಶವು ಪಿತಾಶ್ರೀ ಪ್ರಜಾಪಿತ ಬ್ರಹ್ಮಾ ಮತ್ತು ಮಾತೇಶ್ವರಿ ಜಗದಂಬ ಸರಸ್ವತಿಯವರ ಜೀವನದಲ್ಲಿ ದೊರಕಿತು. ಪಿತಾಶ್ರೀ ಮತ್ತು ಮಾತೇಶ್ವರಿಯವರು ನಮಗಾಗಿ ಎಷ್ಟೊಂದು ವಿರೋಧ, ಕಷ್ಟಗಳನ್ನು ಸಹಿಸಿದರು ! ಅವರು ನಮ್ಮನ್ನು ಎಷ್ಟೊಂದು ಸ್ನೇಹ, ಪ್ರೀತಿ, ಲಾಲನೆ ಪಾಲನೆ, ಹಾಸ್ಯ ಆಟಗಳಿಂದ ಗಹನ ವಿದ್ಯೆಯಲ್ಲಿ ಪ್ರವೀಣ ರನ್ನಾಗಿ ಮಾಡಿದರು !! ಅವರು ನಮ್ಮ ಜೀವನದ ಕ್ಷಣ ಕ್ಷಣದ ವಿಕಟ ಸಮಸ್ಯೆ ಗಳನ್ನು ಬೆಣ್ಣೆಯಿಂದ ಕೂದಲನ್ನು ತೆಗೆದಂತೆ ಸಹಜ ರೀತಿಯಲ್ಲಿ ಬಿಡಿಸಿದರು.

ಈ ದಿವ್ಯಗುಣಗಳ ಧಾರಣೆಯನ್ನು ನಾವು ಅವರ ದೈನಂದಿನ ಜೀವನದಲ್ಲಿ ನೋಡಿದೆವು. ಧೈರ್ಯ ಸಾಹಸಗಳಿಂದ ಕೂಡಿದ ಪುರುಷಾರ್ಥವನ್ನು ಮಾಡಿದರೆ ನಾವೂ ಸಹ ಅವರಂತೆಯೇ ಆಗಬಹುದು. "**ಅವ್ಯಕ್ತ ಅವಸ್ಥೆ**" ಎಂದರೇನೆಂಬುದನ್ನೂ ಸಹ ನಾವು ಅವರ ಜೀವನವನ್ನು ನೋಡಿ ಅರಿತೆವು.

**ಜಿಜ್ಞಾಸು**—ಸಹೋದರಿಯವರೇ "**ಅವ್ಯಕ್ತ ಅವಸ್ಥೆ**" ಎಂದರೇನು ? ನಾನು ಶಿವತಂದೆಯವರ ಜ್ಞಾನ ಮುರಳಿಯಲ್ಲೂ ಇದನ್ನು ಕೇಳಿದ್ದೇನೆ. ಆದರೆ ಇದರ ಸ್ಪಷ್ಟ ಜ್ಞಾನ ನನಗಿಲ್ಲ ಮತ್ತು ಈ ಅವಸ್ಥೆಯನ್ನು ಪ್ರಾಪ್ತಿಮಾಡಿಕೊಳ್ಳುವ ಯುಕ್ತಿಗಳೂ ನನಗೆ ಗೊತ್ತಿಲ್ಲ.

**ಬ್ರಹ್ಮಾಕುಮಾರಿ**—ಯಾವುದು ಸ್ಥೂಲವಲ್ಲವೋ, ಪ್ರಾಕೃತೀಕೃತವಲ್ಲವೋ ಅಥವಾ ಯಾವುದನ್ನು ಈ ಚರ್ಮ ಚಕ್ಷುವಿನಿಂದ ನೋಡಲು ಸಾಧ್ಯವಿಲ್ಲವೋ ಅದಕ್ಕೆ "ಅವ್ಯಕ್ತ" ವೆಂದು ಹೇಳಲಾಗಿದೆ. 'ಆತ್ಮಿಕ ಅವಸ್ಥೆ'ಯ ಮತ್ತೊಂದು ಹೆಸರೇ 'ಅವ್ಯಕ್ತ ಅವಸ್ಥೆ' ಏಕೆಂದರೆ ಆತ್ಮವು ಸ್ಥೂಲವಲ್ಲ; ಅದು ಸೂಕ್ಷ್ಮ ಮತ್ತು ಪ್ರಕಾಶಮಯವಾದದ್ದು. ಆತ್ಮವು ಪ್ರಾಕೃತೀಕೃತವಾದುದಲ್ಲ: ದಿವ್ಯವಾದದ್ದು ಪ್ರಕೃತಿಯಿಂದ ಭಿನ್ನವಾದ ಒಂದು ಸತ್ತೆ. ಆತ್ಮವನ್ನು ಈ ಚರ್ಮ ಚಕ್ಷುವಿನಿಂದ ನೋಡಲು ಸಾಧ್ಯವಿಲ್ಲ. ಈ ಅವ್ಯಕ್ತ ಅವಸ್ಥೆಗೆ "**ವಿದೇಹ ಅವಸ್ಥೆ**" ಯೆಂದೂ ಮತ್ತೊಂದು ಹೆಸರು. ದೇಹರಹಿತ ಅಥವಾ ಅಶರೀರಿ ಎಂಬುದೇ ವಿದೇಹದ ಅರ್ಥ. ದೇಹದಲ್ಲಿದ್ದರೂ ದೇಹ ಭಾವನೆ ಅಥವಾ ಸ್ಥೂಲ ಭಾವನೆ ಇರಬಾರದು. ಇದಕ್ಕೇ ವಿದೇಹಿ ಅವಸ್ಥೆ, ಆತ್ಮಿಕ ಅವಸ್ಥೆ ಅಥವಾ "**ಅವ್ಯಕ್ತ ಅವಸ್ಥೆ**" ಎಂದು ಹೆಸರು.

**ಜಿಜ್ಞಾಸು**— ಈ ಅವಸ್ಥೆಯನ್ನು ಪ್ರಾಪ್ತಿಮಾಡಿಕೊಳ್ಳುವುದು ಹೇಗೆ?

**ಬ್ರಹ್ಮಾಕುಮಾರಿ**— ಆತ್ಮಿಕ ಸ್ಮೃತಿಯಿಂದ ಈ ಅವಸ್ಥೆಯನ್ನು ಹೊಂದಬಹುದು "ನಾನು ಒಂದು ಚೈತನ್ಯ ಜ್ಯೋತಿ ಬಿಂದು ಆತ್ಮನಾಗಿದ್ದೇನೆ, ನಾನು ಬೆಳಕಿನ ಒಂದು ಚೈತನ್ಯ ತಾರೆಯಾಗಿದ್ದೇನೆ, ನಾನು ಜ್ಯೋತಿ ಬಿಂದು ಪರಮಾತ್ಮನ ಸಂತಾನನಾಗಿದ್ದೇನೆ, ಜ್ಯೋತಿ ಲೋಕವಾದ ಬ್ರಹ್ಮಲೋಕದಿಂದ ಈ ಸೃಷ್ಟಿ ಮಂಚದ ಮೇಲೆ ಬಂದಿದ್ದೇನೆ, ಉಳಿದವರೆಲ್ಲರೂ ಸಹ ವಾಸ್ತವವಾಗಿ

ಆತ್ಮರೇ ಆಗಿದ್ದಾರೆ" — ಈ ಸ್ಮೃತಿಯಲ್ಲಿರುವವರ ಅವಸ್ಥೆಯೂ ಸಹ ಆತ್ಮಿಕ, ಅವ್ಯಕ್ತ ಅಥವಾ ವಿದೇಹ ಸ್ಥಿತಿಯುಳ್ಳದ್ದಾಗಿರುತ್ತದೆ. ಏಕೆಂದರೆ "ಸ್ಮೃತಿಯಂತೆ ಸ್ಥಿತಿ" ಎಂಬ ಗಾದೆಯೂ ಇದೆ.

**ಜಿಜ್ಞಾಸು**— ಇದಕ್ಕಾಗಿ ಯಾವ ಪುರುಷಾರ್ಥ ಮಾಡಬೇಕು ?

**ಬ್ರಹ್ಮಾಕುಮಾರಿ** — ಮುಖ್ಯ ರೂಪದಿಂದ ತನ್ನನ್ನು 'ಆತ್ಮ' ವೆಂದು ನಿಶ್ಚಯಮಾಡಿಕೊಳ್ಳಬೇಕು ಹಾಗೂ ಪರಮಪಿತ ಪರಮಾತ್ಮನನ್ನೂ ಮತ್ತು ಬ್ರಹ್ಮಲೋಕವನ್ನೂ ನೆನಪಿನಲ್ಲಿಡಬೇಕು. ಇದೇ ಪುರುಷಾರ್ಥ. ಆತ್ಮ-ನಿಶ್ಚಯ-ಬುದ್ಧಿಯುಳ್ಳವರಾಗುವುದು (Soul concious) ಹಾಗೂ ಜ್ಯೋತಿಬಿಂದು ಪರಮಾತ್ಮನೊಬ್ಬನ ಅವ್ಯಭಿಚಾರಿ ನೆನಪಿನಲ್ಲಿರುವುದೇ ಒಟ್ಟು ಜ್ಞಾನದ ಸಾರವಾಗಿದೆ. ಮನುಷ್ಯನ ಭವಿಷ್ಯದ ಆಧಾರವೆಲ್ಲವೂ ಇದೇ ಆಗಿದೆ. ಇದೇ ನಮ್ಮ ಅಪಾರ ಸಂಪತ್ತಿನ ಸಾಧನವಾಗಿದೆ. ಇದರಿಂದಲೇ ಮಾಯೆಯನ್ನು ಗೆದ್ದು ಜಗಜ್ಜಿತರಾಗುತ್ತೇವೆ. ಈ ಅವ್ಯಕ್ತ ಅವಸ್ಥೆಯು ಅತಿ ಮಧುರವಾದದ್ದು. ಇದು ಸಂಕಲ್ಪ-ವಿಕಲ್ಪದಿಂದ ಭಿನ್ನ, ಇಚ್ಛೆ-ತೃಷ್ಣಾ ರಹಿತ, ಮಾನಾಪಮಾನಗಳಿಂದ ಹೊರತಾದದ್ದು, ವಿಕಾರಗಳಿಂದ ನಿವೃತ್ತ, ಅತಿ ಆನಂದವಾದದ್ದು, ವಾಯುವಿನಂತೆ ಹಗುರ; ಕಾರ್ಯಮಾಡಲು ಸ್ಫೂರ್ತಿಯನ್ನೀಯುವುದು, ಇದರಲ್ಲಿ ಆತ್ಮವಿಶ್ವಾಸ ಹಾಗೂ ಶಕ್ತಿಯು ತುಂಬಿರುತ್ತದೆ ಮತ್ತು ನಾವು ದೇವತೋಪಮರು, ದಿವ್ಯಪುರುಷರೆಂಬ ಅನುಭವವನ್ನು ಮಾಡಿಸುವಂತದ್ದು.

ನಾನು ಹೇಳಿದ ದೈವೀಗುಣಗಳೆಲ್ಲವೂ ಈ ಅವಸ್ಥೆಗೆ ಸಹಾಯಕವಾದವುಗಳು ಮತ್ತು ಅತ್ಯಾವಶ್ಯಕವಾದವುಗಳು. ಇದಕ್ಕಾಗಿ ಮಾಡಬೇಕಾದ ಪುರುಷಾರ್ಥದ ಬಗ್ಗೆ ಸಂಕ್ಷಿಪ್ತವಾಗಿ ಹೇಳುವೆನು. "ದೇಹರಹಿತ ಆತ್ಮನು ನಾನು. ಈ ಪೃಥ್ವಿ-ಮಂಚದ ಮೇಲೆ ಬಂದಿದ್ದೆನು; ಈಗ ನನ್ನ ಪಾತ್ರ ಮುಗಿಯಿತು; ನಾಟಕದ ಅಂತ್ಯವಾಗಲಿದೆ; ನಾನು ಪುನಃ ವಿದೇಹವಾಗಿ ವಾಪಸು ಹೋಗಬೇಕಾಗಿದೆ. ಈಗ ನಾನು ಈ ಯಾತ್ರೆಯಿಂದ ಹಿಂತಿರುಗುತ್ತಿದ್ದೇನೆ" ಎಂಬುದನ್ನು ಮೊಟ್ಟ ಮೊದಲು ನೆನಪಿಡಬೇಕು. ಆಹಾರ ಅಥವಾ ಭೋಜನವು ಹಿತ-ಮಿತವಾಗಿರಬೇಕು. ಪದೇ ಪದೇ ಭೋಜನ ಮಾಡಬಾರದು. ಆಹಾರ

ವನ್ನು ತೆಗೆದುಕೊಳ್ಳುವುದರಲ್ಲಿ ಕಾಲನಿಯಮವಿರಬೇಕು – ಸಾತ್ವಿಕಾಹಾರವನ್ನು ಮಾತ್ರ ಸ್ವೀಕರಿಸುವುದು ಬಹು ಮುಖ್ಯ.

ಕಾರ್ಯವ್ಯವಹಾರ ಕ್ಷೇತ್ರವನ್ನೂ ಅಧಿಕವಾಗಿ ಹರಡಿಕೊಳ್ಳಬಾರದು. ತನ್ನ ಯೋಗಾಭ್ಯಾಸ, ಜ್ಞಾನದ ಅಧ್ಯಯನ, ಈಶ್ವರೀಯ ಸೇವೆ ಇವುಗಳಿಗಾಗಿ ಅವಶ್ಯವಾಗಿ ಪರ್ಯಾಪ್ತ ಹಾಗೂ ಅನುಕೂಲ ಸಮಯವನ್ನು ಗೊತ್ತುಮಾಡಿಕೊಳ್ಳಬೇಕು. ಕಾರ್ಯ ವ್ಯವಹಾರದ ಓಡಾಟದಲ್ಲೂ ಮಧ್ಯ ಮಧ್ಯೆ ಸ್ವಲ್ಪ ನಿಮಿಷಗಳ ಕಾಲ ಸ್ವ–ಸ್ಥಿತಿ ಹಾಗೂ ಈಶ್ವರೀಯ ಸ್ಮೃತಿಯ ಕಡೆಗೆ ಗಮನ ಕೊಡಬೇಕು.

ಕರ್ಮವನ್ನು ಅನಾಸಕ್ತ ವೃತ್ತಿಯಿಂದ ಹಾಗೂ ನಿಸ್ವಾರ್ಥಭಾವದಿಂದ ಮಾಡಬೇಕು, ಕಾರ್ಯದ ಪ್ರಶಂಸೆಯ ಇಚ್ಛೆಯನ್ನಿಟ್ಟುಕೊಳ್ಳಬಾರದು

ಏನೇ ನಡೆಯಲಿ ಅದು "ಪೂರ್ವ ನಿಶ್ಚಿತವಾದುದು" ಎಂದು ತಿಳಿದು ಸಾಕ್ಷಿಭಾವದಿಂದಿರಬೇಕು. "ಕಲ್ಪದ ಹಿಂದೆಯೂ ಹೀಗೆಯೇ, ನಡೆದಿತ್ತು, ಪುನಃ ಕಲ್ಪದ ನಂತರ ಹೀಗೆಯೇ ಆಗುವುದು, ಇದೇನೂ ಹೊಸದಾಗಿಲ್ಲ" (Nothing new) — ಸದಾ ಈ ನಿಶ್ಚಯದಲ್ಲಿರಬೇಕು.

ಇದಕ್ಕೂ ಅತಿಶಯವಾಗಿ ನಷ್ಟೋಮೋಹ ಮತ್ತು ನಿರಾಕಾರಿ–ನಿರಹಂ–ಕಾರಿ ಸ್ಥಿತಿಯಲ್ಲಿರಬೇಕು ಹಾಗೂ ಜ್ಞಾನದ ಮನನ, ವಿಚಾರ ಸಾಗರ ಮಂಥನ ಮತ್ತು ಏಕಾಂತ ಸೇವನೆಯನ್ನೂ ಮಾಡಬೇಕು. ಈ ಯುಕ್ತಿಗಳಿಂದ ಅವ್ಯಕ್ತ ಅಥವಾ ವಿದೇಹ ಅವಸ್ಥೆ ಪ್ರಾಪ್ತಿಯಾಗುತ್ತದೆ. ಒಳ್ಳೆಯದು ಓಂಶಾಂತಿ

ಜಿಜ್ಞಾಸು — ಓಂ ಶಾಂತಿ.

—೦—

ಸಿಂಹವು ವನರಾಜನಾದರೂ ಸೊಳ್ಳೆ ನೊಣಗಳು ಅದನ್ನು ಸುಖವಾಗಿ ನಿದ್ರೆಮಾಡಲು ಬಿಡುವುದಿಲ್ಲ. ಇದೇ ಪ್ರಕಾರವಾಗಿ ಮನುಷ್ಯನ ಮೇಲೆ ತೃಷ್ಣೆ, ಇಚ್ಛೆ ಇತ್ಯಾದಿಗಳ ಯುದ್ಧ ನಡೆಯುತ್ತದೆ. ಇವುಗಳು ಮನುಷ್ಯನನ್ನು ಸುಖಿಯಾಗಲು ಬಿಡದೆ ಅಸಂತುಷ್ಟನನ್ನಾಗಿಯೂ ದುಃಖಿಯನ್ನಾಗಿಯೂ ಮಾಡುತ್ತವೆ.

ಗುಲಾಬಿಯ ಹೂವು ಮುಳ್ಳುಗಳಲ್ಲಿದ್ದರೂ ತನ್ನ ಸುಗಂಧವನ್ನು ಹರಡುವಂತೆ ಜ್ಞಾನಿ ಮನುಷ್ಯನು ತನ್ನ ಬಗ್ಗೆ ನಿಂದನೆಯನ್ನು ಕೇಳುತ್ತಿದ್ದರೂ ಹಸನ್ಮುಖಿಯಾಗಿರುವನು ಮತ್ತು ನಿಂದಕರನ್ನೇ ತನ್ನ ಮಿತ್ರರೆಂದು ತಿಳಿದು ತನ್ನ ಸ್ವಭಾವದಿಂದ ಇತರರಿಗೆ ದಿವ್ಯಗುಣಗಳೆಂಬ ಸುಗಂಧವನ್ನು ಹರಡುತ್ತಾನೆ.

ಈ ಜೀವನದಲ್ಲಿ ನಮ್ಮ ಮೇಲೆ ಮಾಯೆಯು ಯುದ್ಧ ಮಾಡುತ್ತದೆ. ರೋಗ, ಹಾನಿ, ಮತ-ಭೇದ, ವಿರೋಧ, ನಿಂದೆ, ಆಯಾಸ ಮೊದಲಾದವುಗಳ ಆಕ್ರಮಣವಾಗಿಯೇ ತೀರುತ್ತದೆ. ನಾವು ಎಚ್ಚರಿಕೆಯಿಂದ ಸ್ಥಿರಬುದ್ಧಿಯುವರಾಗಿದ್ದರೆ ಪಾರಾಗುತ್ತೇವೆ. ಇಲ್ಲದೆ ಸ್ವಸ್ಥಿತಿಯಿಂದ ಅಲುಗಾಡಿದರೆ ನಾವು ಈ ಯುದ್ಧದಲ್ಲಿ ಗಾಬರಿಗೊಳ್ಳುತ್ತೇವೆ.

ಯಾರು ದಿವ್ಯಗುಣಗಳ ಧಾರಣೆಯೆಂಬ ಪದಕವನ್ನು ಪಡೆದಿರುವರೋ, ಯಾರು ಇತರರನ್ನು ಮಾಯೆಯ ಕಾರಾಗೃಹದಿಂದ ಬಿಡಿಸುವ ಜವಾಬ್ದಾರಿಯೆಂಬ ಪ್ರಣ್ಯ ಮುಕುಟವನ್ನು ತಮ್ಮ ಶಿರದಲ್ಲಿ ಧರಿಸಿರುವರೋ, ಯಾರು ಸದಾ ಹರ್ಷಿತರಾಗಿರುವರೋ ಅವರೇ ಮಹಾರಥಿಗಳು.

# ಕರ್ನಾಟಕದಲ್ಲಿ ಪ್ರಜಾಪಿತ ಬ್ರಹ್ಮಾಕುಮಾರೀ ಈಶ್ವರೀಯ ವಿಶ್ವವಿದ್ಯಾಲಯದ ಸೇವಾ ಕೇಂದ್ರಗಳು

೧. ನಂ. ೩೨, ನ್ಯೂ ಹೈಸ್ಕೂಲ್ ರಸ್ತೆ, ವಿಶ್ವೇಶ್ವರಪುರ, ಬೆಂಗಳೂರು–೪
Phone : 63491

೨. ನಂ. ೫೨, ೨ನೇ ಮಹಡಿ, ರಂಗಸ್ವಾಮಿಗುಡಿ ಬೀದಿ, ಬೆಂಗಳೂರು–೫೩

೩. ನಂ. ೨೫, ತೊಪ್ಪಮೊದಲಿಯಾರ್ ರಸ್ತೆ, ಶಿವಾಜಿನಗರ, ಬೆಂಗಳೂರು-೧
Phone : 53639

೪. ನಂ. ೨೦, ೯ನೇ ಮೇನ್, ೩ನೇ ಬ್ಲಾಕ್, ಜಯನಗರ, ಬೆಂಗಳೂರು ೧೧
Phone : 65726

೫. ನಂ. ೩೦೫೦, ಮರಿಯಪ್ಪನಪಾಳ್ಯ, ಮೈನ್ ರಸ್ತೆ, ಬೆಂಗಳೂರು–೨೧
Phone : 33543

೬. ನಂ. ೧೪, ಸದಾಶಿವಮೊದಲಿಯಾರ್ ರಸ್ತೆ, ಅಲಸೂರು, ಬೆಂಗಳೂರು ೮

೭. ನಂ. ೧೯, ೩ನೇ ಮೇನ್‌ರಸ್ತೆ, ಲಕ್ಷ್ಮೀನಾರಾಯಣಪುರ, ಬೆಂಗಳೂರು ೨೧

೮. ನಂ. ೬೫೬, ೩ನೇ ಕ್ರಾಸ್, ಮತ್ತಿಕೆರೆ ಮೈನ್ ರೋಡ್, ಯಶವಂತಪುರ, ಬೆಂಗಳೂರು–೨೨

೯. ನಂ. ೭೬೧, ೩ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–೧೦

೧೦. ನಂ. ೩೫, ೪ನೇ ಮೇನ್ ರಸ್ತೆ, ಚಾಮರಾಜಪೇಟೆ, ಬೆಂಗಳೂರು–೧೮

೧೧. ನಂ. ೪೩೭, ೮ನೇ ಮೇನ್ ರಸ್ತೆ, ಹನುಮಂತನಗರ, ಬೆಂಗಳೂರು–೧೯

೧೨. ನಂ. ೮೧೦, ೧೧ನೇ ಕ್ರಾಸ್, ವೈಯಾಲಿಕಾವಲ್, ಬೆಂಗಳೂರು–೩

೧೩. ನಂ. ೪೯, ೪ನೇ ಮೈನ್ ರಸ್ತೆ, ೧೨ನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು–೩೦

೧೪, ನಂ. ೨೦, ೯ನೇ ಕ್ರಾಸ್, ಕಬ್ಬನ್‌ಪೇಟೆ, ಬೆಂಗಳೂರು–೫೨

೧೫. ನಂ. ೭೦/೧, ಕುಮಾರಪಾರ್ಕ್ ವೆಸ್ಟ್, ಬೆಂಗಳೂರು-೨೦
Phone : 75388

೧೬. ನಂ. ೧೯೦, ೪೪ನೇ ಕ್ರಾಸ್, ೮ನೇ ಬ್ಲಾಕ್, ಜಯನಗರ, ಬೆಂಗಳೂರು–೪೭

೧೭. ನಂ. ೮೭, ತಿಪ್ಪಸಂದ್ರ, H. A. L. ಪೋಸ್ಟ್, ಬೆಂಗಳೂರು–೧೭

೧೮. ನಂ. ೭೯೧, ೫ನೇ ಮೇನ್ ರಸ್ತೆ, (ಹೊಸಹಳ್ಳಿ) ವಿಜಯನಗರ, ಬೆಂಗಳೂರು–೪೦

೧೯. ಚಾಮುಂಡಿಬೆಟ್ಟ, ಮೈಸೂರು–೫

೨೦. ನಂ. ೧೩೭೧, ಇರ್ವಿನ್ ರಸ್ತೆ, ಮೈಸೂರು–೧ Phone : 22220

೨೧. ಸಿನಿಮಾ ಮಂದಿರದ ಹತ್ತಿರ, ಕೃಷ್ಣರಾಜನಗರ, ಮೈಸೂರು ಜಿಲ್ಲೆ
೨೨. ಮಂಗಳನಿಲಯ, ಕೃಷ್ಣ ರಾಜೇಂದ್ರ ರೋಡ್, ಮಂಡ್ಯ-೫೭೧೪೦೧
೨೩. ನೆಹರೂ ರೋಡ್, ಹಾಸನ-೫೭೩೨೦೧
೨೪. ಜಿಗಳೂರು ಬಿಲ್ಡಿಂಗ್, ಹುಬ್ಬಳ್ಳಿ Phone : 3068
೨೫. ವಿವೇಕಾನಂದ ಸರ್ಕಲ್, ರಾಯಚೂರು-೫೮೪೧೦೧
೨೬. ಶೇಷಪ್ಪಶೆಟ್ಟಿ ಬಿಲ್ಡಿಂಗ್, ದುರ್ಗಿಗುಡಿ, ಶಿವಮೊಗ್ಗ-೫೭೭೨೦೧
೨೭. ಶ್ರೀನಿವಾಸ ಬಿಲ್ಡಿಂಗ್, ಮಹೇಂದ್ರ ಸರ್ಕಲ್, ಗದಗ-೫೮೨೧೦೧
೨೮. ಜಗತ್ ಎಕ್ಸ್‌ಟೆನ್‌ಷನ್, ಗುಲ್ಬರ್ಗ-೫೮೫೧೦೫ P. ೯೩೫
೨೯. ಸರಸ್ವತಿ ನಿವಾಸ, ಔಟ್‌ಷಾಗಂಜ್, ಬೀದರ್-೫೮೫೪೦೧
೩೦. ಗಾಂಧಿಚೌಕ, ಬಸವಕಲ್ಯಾಣ-೫೮೫೩೨೭, ಬೀದರ್ ಜಿಲ್ಲೆ
೩೧. ನಂ. ೨೬೫, ಅಮರ್ ಸೆಟ್ಟಿಗಲ್ಲಿ, ಬಾಗಲಕೋಟೆ-೫೮೭೧೦೧, ಬಿಜಾಪುರ ಜಿಲ್ಲೆ
೩೨. ಹೇಮಾವತಿಪೇಟೆ, ದೊಡ್ಡಬಳ್ಳಾಪುರ-೫೬೧೨೦೩, ಬೆಂಗಳೂರು ಜಿಲ್ಲೆ
೩೩. ಗಾಂಧಿ ಸರ್ಕಲ್, ಗೌರಿಬಿದನೂರು-೫೬೧೨೦೮, ಕೋಲಾರ ಜಿಲ್ಲೆ
೩೪. ಮುನ್ಸಿಪಲ್ ರಸ್ತೆ, ನೆಲಮಂಗಲ, ಬೆಂಗಳೂರು ಜಿಲ್ಲೆ-೫೬೨೧೨೩
೩೫. ನಂ. ೧೫೪, ರಾಮರಾವ್ ಬಿಲ್ಡಿಂಗ್, ಉರಿಗಾಂಪೇಟೆ, ಕೆ.ಜಿ.ಎಫ್.-೫೬೩೧೨೧
೩೬. ಶಕುಂತಲ ನಿವಾಸ್, ಮಹಾತ್ಮಪುಲೇ ರೋಡ್, ಶಾಪುರ್, ಬೆಳಗಾಂ
೩೭. ತ್ರಿಪುರಸುಂದರಿ ಟಾಕೀಸ್ ರೋಡ್, ಬಿಜಾಪುರ-೫೮೬೧೦೧
೩೮. ಚೊಕ್ಕಸಂದ್ರ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ
೩೯. ಸಿ/ಓ, ಶ್ರೀಆತ್ಮಾರಾಮ್ ಬ್ರಾಹ್ಮಣರ ಬೀದಿ, ಕೋಲಾರ
೪೦. ಕುಪ್ಪಾಗಾರ್ ಅಯ್ಯಪ್ಪನ್ ಸೆಂಟರ್, ಕಂಬಳಿ ಬಜಾರ್, ಬಳ್ಳಾರಿ-೫೮೩೧೦೧
೪೧. ಬಸ್‌ಸ್ಟಾಂಡ್ ಎದುರು, ಕಾರವಾರ
೪೨. ಬಾದಾಮಿ ಬಿಲ್ಡಿಂಗ್ಸ್, ದಾವಣಗೆರೆ
೪೩. ಕರ್ನಾಟಕ ಹೈಸ್ಕೂಲ್ ರಸ್ತೆ, ಧಾರವಾಡ
೪೪. ಹನುಮಂತಪ್ಪ ಚೌಕ, ಚಿಕ್ಕಮಗಳೂರು
೪೫. ಚರ್ಚ್‌ರೋಡ್, ತೀರ್ಥಹಳ್ಳಿ
೪೬. ನೆಹರು ರೋಡ್, ಹೊಸನಗರ, ಶಿವಮೊಗ್ಗ ಜಿಲ್ಲೆ

# ಕನ್ನಡದಲ್ಲಿ ಈಶ್ವರೀಯ ಜ್ಞಾನ ಸಾಹಿತ್ಯಮಾಲೆ

—00—

೧] ಜೀವನವನ್ನೇ ಪರಿವರ್ತಿಸುವ ಒಂದು ಅದ್ಭುತ ಜೀವನ ಚರಿತ್ರೆ

೨] ದಿವ್ಯಗುಣಗಳ ಹೂಮಾಲೆ....ಭಾಗ–೧

೩] ದಿವ್ಯಗುಣಗಳ ಹೂಮಾಲೆ....ಭಾಗ–೨

೪] ಯೋಗದ ವಿಧಿ ಮತ್ತು ಸಿದ್ಧಿ ....ಭಾಗ–೧

೫] ಪರಮಾತ್ಮನ ಸಾಕ್ಷಾತ್ಕಾರ

೬] ನಾನು ಯಾರು ?

೭] ಮನ–ಶಾಂತಿ

೮] ಮನುಷ್ಯರ ಲಳ ಜನ್ಮಗಳ ಕಥೆ

೯] ಪತಿತ ಪಾವನ ಯಾರು ?

೧೦] ಈಶ್ವರೀಯ ಜ್ಞಾನದ ಸಾಪ್ತಾಹಿಕ ಶಿಕ್ಷಣ [ಸಂಕ್ಷಿಪ್ತ]

## ಮುದ್ರಣದಲ್ಲಿ

೧] ಪರಮಾತ್ಮನ ಅವತಾರ ಯಾವಾಗ? ಏಕೆ? ಹೇಗೆ?

೨] ಯೋಗದ ವಿಧಿ ಮತ್ತು ಸಿದ್ಧಿ ....ಭಾಗ ೨